ಉಪನ್ಯಾಸ ಗ್ರಂಥಮಾಲೆ

೨೯

# ಕನ್ನಡ ಕಥಾಸೃಷ್ಟಿ

ಬಿ. ಬಿ. ಮಹೀಶವಾಡಿ, ಎಂ. ಎ., ಬಿ. ಎಡ್.




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೯೭೫

ಉಪನ್ಯಾಸ ಗ್ರಂಥಮಾಲೆ

೨೯

# ಕನ್ನಡ ಕಥಾಸೃಷ್ಟಿ

ಬಿ. ಬಿ. ಮಹೀಶವಾಡಿ,

ಎಂ. ಎ., ಬಿ. ಎಡ್.




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ನವ್ಹೆಂಬರ ೧೯೭೫

ಪ್ರಕಾಶಕರು:

ಎಸ್. ಎಸ್. ಒಡೆಯರ, ಎಂ. ಎ., ಎಲ್ಎಲ್. ಬಿ.
ಕುಲಸಚಿವರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ, ೨,೦೦೦ ಪ್ರತಿಗಳು
ಡಿಶೆಂಬರ, ೧೯೬೨

ದ್ವಿತೀಯ ಮುದ್ರಣ, ೩,೦೦೦ ಪ್ರತಿಗಳು
ಮೇ, ೧೯೬೮

ತೃತೀಯ ಮುದ್ರಣ, ೫,೦೦೦ ಪ್ರತಿಗಳು
ನವ್ಹೆಂಬರ ೧೯೭೫



ಬೆಲೆ : ೨೫ ಪೈಸೆ

ಮುದ್ರಕರು:

ಭಾರತ ಮುದ್ರಣಾಲಯ
ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ

ಬರೆದು ಬಿನ್ನವಿಸಿಕೊಳ್ಳುತ್ತಿರುವದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನವಿಟ್ಟು ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ೨೨೧ ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿನ್ಹೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೨-೧೧-೧೯೭೫

ಆರ್. ಸಿ. ಹಿರೇಮಠ
ಕುಲಪತಿಗಳು

# ಅರಿಕೆ

## (ಪ್ರಥಮ ಮುದ್ರಣ)

ಬೆಳಗಾವಿ ಜಿಲ್ಲೆಯ ಕಟಕೋಳ ಗ್ರಾಮದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ 'ವ್ಯಾಸಂಗ ವಿಸ್ತರಣ ಸಮಿತಿ'ಯ ಪತಿಯಿಂದ ಏರ್ಪಡಿಸಲಾಗಿದ್ದ ೬೬ ನೆಯ ಉಪನ್ಯಾಸ ಶಿಬಿರದಲ್ಲಿ 'ಕನ್ನಡ ಸಾಹಿತ್ಯದಲ್ಲಿ ಕಥಾಸೃಷ್ಟಿ' ಎಂಬ ವಿಷಯದ ಮೇಲೆ ನನಗೆ ಮಾತನಾಡುವ ಅವಕಾಶ ದೊರೆತಿತ್ತು. ಚಿಕ್ಕ ಹೊತ್ತಿಗೆಯ ಮೂಲಕ ಅದು ಪ್ರಕಟವಾಗುವ ನಿರ್ಧಾರ ತಿಳಿದ ಮೇಲೆ, ಅದೇ ವಿಷಯವನ್ನು ವಿಸ್ತರಿಸಿ, ಅಲ್ಪ-ಸ್ವಲ್ಪ ವ್ಯತ್ಯಾಸದೊಡನೆ ಪ್ರಬಂಧ ರೂಪಕ್ಕೆ ತಿರುಗಿಸಿ ಈ ಚಿಕ್ಕ ಪುಸ್ತಕವನ್ನು ಸಿದ್ಧಗೊಳಿಸಿದೆನು. ಉಪನ್ಯಾಸದ ವಿಷಯ 'ಕನ್ನಡ ಸಾಹಿತ್ಯದಲ್ಲಿ ಕಥಾಸೃಷ್ಟಿ' ಎಂದಿತ್ತು; ಆ ಹೆಸರನ್ನು ಸ್ವಲ್ಪ ಸಂಕ್ಷಿಪ್ತಗೊಳಿಸಿ 'ಕನ್ನಡ ಕಥಾಸೃಷ್ಟಿ' ಎಂದು ಕರೆದಿದ್ದೇನೆ. ಈ ಬದಲಾವಣೆ ಒಪ್ಪುವುದೆಂದು ಭಾವಿಸಿದ್ದೇನೆ.

ಕಥಾಸೃಷ್ಟಿ, ಜಾನಪದ ಕಥಾಸೃಷ್ಟಿ, ಮಾರ್ಗ-ಕಥಾಸೃಷ್ಟಿ, ಹಳೆಗನ್ನಡ ಕಥಾಸೃಷ್ಟಿ, ಹೊಸಗನ್ನಡ ಕಥಾಸೃಷ್ಟಿ ಎಂದು ಪ್ರಕರಣಗಳನ್ನು ರಚಿಸಿಕೊಂಡು ಒಟ್ಟಿನಲ್ಲಿ ಏಕರೂಪತೆ-ಯನ್ನು ಸಾಧಿಸಲು ಯತ್ನಿಸಿದ್ದೇನೆ. ವಿಷಯವ್ಯಾಪ್ತಿ ಹಿರಿ-ದಾದ್ದರಿಂದಲೂ, ಕೃತಿ ಕಿರಿದಾದ್ದರಿಂದಲೂ ಬಹಳ ವಿಷಯ ಕೈ ಬಿಟ್ಟು ಹೋಗಿ ಸಂಕ್ಷಿಪ್ತ ಸ್ವರೂಪದರ್ಶನ ಮಾತ್ರ ಸಾಧ್ಯ-ವಾಗಿದೆ. ಗಿಂಡಿಯೊಳಗೆಷ್ಟು ಕಂಡೀತು ಆಕಾಶ ? ಕಂಡಷ್ಟರಿಂದಲೇ ಸಂತುಷ್ಟರಾಗಬೇಕಲ್ಲವೆ ?

ಕೆಲವು ಪ್ರಸಿದ್ಧ ಸಾಹಿತಿಗಳ ಗ್ರಂಥಗಳಿಂದ ಹಲವಾರು ಮಾತುಗಳನ್ನು ಎತ್ತಿಕೊಂಡಿದ್ದೇನೆ. ಈ ಋಣಕ್ಕೆ ಅವರಿಗೆ ನಾನು ಇಲ್ಲಿ ಪ್ರೀತಿ-ವಿಶ್ವಾಸಗಳಿಂದ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತಿರುವೆ.

ಅಂದು ನನ್ನ ಉಪನ್ಯಾಸಕ್ಕೆ ಏರ್ಪಾಡುಮಾಡಿ, ಇಂದು ಈ ಚಿಕ್ಕ ಪುಸ್ತಕವನ್ನು ಪ್ರಕಟಿಸಿ ನನಗೆ, ನನ್ನ ವಿಚಾರಗಳಿಗೆ, ಗೌರವ ತೋರಿಸಿದ್ದಕ್ಕಾಗಿ ನಾನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಚಿರಋಣಿ. ಸಂಬಂಧಿಸಿದ ಅಧಿಕಾರವರ್ಗಕ್ಕೂ ನನ್ನ ಹೃತ್ಪೂರ್ವಕ ವಂದನೆಗಳು.

ಲಿಂಗರಾಜ ಕಾಲೇಜ,
ಬೆಳಗಾವಿ
ತಾ. ೨೨-೭-೬೨

ಬಿ. ಬಿ. ಮಹೀಶವಾಡಿ

# ತೃತೀಯ ಮುದ್ರಣ

'ಕನ್ನಡ ಕಥಾಸೃಷ್ಟಿ' ತೃತೀಯ ಮುದ್ರಣ ಹೊಂದುತ್ತಿರುವುದು ನನಗೆ ತುಂಬ ಹಿಗ್ಗಿನ ವಿಷಯವಾಗಿದೆ. ಅದು ಸಹೃದಯ ವಾಚಕರ ಸದಭಿರುಚಿಯನ್ನೂ, ಪ್ರೀತಿ-ವಿಶ್ವಾಸಗಳನ್ನೂ ಸೂಚಿಸುತ್ತಿದೆ. ಅವರಿಗೆ ನನ್ನ ಕೃತಜ್ಞತೆಯ ಹೃತ್ಪೂರ್ವಕ ವಂದನೆಗಳು.

ಕನ್ನಡ ನಾಡಿನ ಸುಪ್ರಸಿದ್ಧ ವಿದ್ವಾಂಸರ ಅಭಿಪ್ರಾಯಗಳನ್ನೂ, ಉಪಯುಕ್ತ ಹೇಳಿಕೆಗಳನ್ನೂ ಈ ಪುಸ್ತಕದಲ್ಲಿ ಆಯಾ ಸಂದರ್ಭಗಳಲ್ಲಿ ಬಳಸಿಕೊಳ್ಳಲಾಗಿದೆ. ಅವುಗಳ ಸಂದರ್ಭ ಸೂಚನೆಯನ್ನು ಅಡಿ ಟಿಪ್ಪಣಿಯಲ್ಲಿ ಕೊಡುವ ನನ್ನ ಆಶೆ ಪುಟ್ಟ ಪುಸ್ತಕದಲ್ಲಿ ಸಾಧ್ಯವಾಗಲಿಲ್ಲ. ಆದರೂ, ಜಿಜ್ಞಾಸುಗಳು ಕೊನೆಗೆ ಕೊಟ್ಟ ಗ್ರಂಥಗಳಲ್ಲಿ ಸಂಬಂಧಿಸಿದ ಆಧಾರಗಳನ್ನೂ, ಹೆಚ್ಚಿನ ನೆರವನ್ನೂ ಪಡೆಯಬಹುದಾಗಿದೆ.

ಈ ಆವೃತ್ತಿಯಲ್ಲಿ ಹೆಚ್ಚಿನ ಬದಲಾವಣೆಗಳನ್ನು ಮಾಡಿಲ್ಲವಾದರೂ, ಅಲ್ಲಲ್ಲಿ ಚಿಕ್ಕಪುಟ್ಟ ತಿದ್ದುಪಡೆಗಳನ್ನು ಮಾಡಿ ಕೃತಿ ಹೆಚ್ಚು ಪರಿಶುದ್ಧವಾಗುವಂತೆ ಯತ್ನಿಸಲಾಗಿದೆ.

ಪ್ರಸ್ತುತ ಆವೃತ್ತಿಯನ್ನು ಪ್ರಕಟಿಸಿ ಪ್ರೋತ್ಸಾಹಿಸಿದ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರವರ್ಗಕ್ಕೆ ನಾನು ಚಿರಋಣಿಯಾಗಿದ್ದೇನೆ.

ಕನ್ನಡ ಅಧ್ಯಯನ ಪೀಠ, ಬಿ. ಬಿ. ಮಹೀಶವಾಡಿ
ಜೈನ ಶಾಖೆ,
ಕ. ವಿ. ವಿ. ಧಾರವಾಡ
ತಾ. ೪-೬-೧೯೭೫

---

# ಪರಿವಿಡಿ

# ಕಥಾಸೃಷ್ಟಿ

## ೧. ಪ್ರಾರಂಭ :

ಮಾನವ ತನ್ನ ಭಾವನೆಗಳ ಅಭಿವ್ಯಕ್ತಿಗೆ, ವಿಚಾರಗಳ ಪ್ರಕಟನೆಗೆ ಎರಡು ಪ್ರತ್ಯೇಕ ಮಾರ್ಗಗಳನ್ನೇ ಕಂಡುಹಿಡಿದಿದ್ದಾನೆ. ಒಂದರಲ್ಲಿ ಚಿತ್ರ, ಶಿಲ್ಪ, ನೃತ್ಯ, ನಾಟಕ, ಸಂಗೀತ, ಸಾಹಿತ್ಯ ಮುಂತಾದ ಲಲಿತ ಕಲೆಗಳ ಮುಖಾಂತರ ಭಾವನೆ-ಗಳನ್ನು ವ್ಯಕ್ತಮಾಡಿದನು. ಮತ್ತೊಂದರಲ್ಲಿ ತರ್ಕ, ನ್ಯಾಯ ಛಂದಸ್ಸು, ವ್ಯಾಕರಣ, ಪೌರನೀತಿ, ರಾಜನೀತಿ, ಭೌತಶಾಸ್ತ್ರ, ರಸಾಯನಶಾಸ್ತ್ರ, ಮುಂತಾದ ಶಾಸ್ತ್ರಗಳ ರೂಪದಿಂದ ವಿಚಾರಗಳನ್ನು ಪ್ರಕಟಿಸಿದನು. ಒಂದರಿಂದ ಹೃದಯ ಸಂಪತ್ತಿಯನ್ನೂ ಇನ್ನೊಂದರಿಂದ ಬುದ್ಧಿ ವಿಕಾಸವನ್ನೂ ಪಡೆದುಕೊಂಡನು.

ಲಲಿತಕಲೆಗಳಲ್ಲಿ ಸಾಹಿತ್ಯ ವಿಶೇಷ ಶಕ್ತಿಯುಳ್ಳದು. ಬಹುಕಾಲ ಬಾಳುವಂಥದು. ಜೀವನಕ್ಕೆ ಹೆಚ್ಚು ಉಪಯುಕ್ತವಾದುದು. ಸಾಹಿತ್ಯದಲ್ಲಿ ಶಾಸ್ತ್ರಸಾಹಿತ್ಯವನ್ನು ಉಳಿದರೆ ಲಲಿತಸಾಹಿತ್ಯ ಶುದ್ಧ ಕಲಾಪ್ರಪಂಚಕ್ಕೆ ಸೇರಿ ನಿಲ್ಲುತ್ತದೆ. ಅದು ಭಾವನಾತ್ಮಕವಾದುದು. ಹೃದಯಸ್ಪರ್ಶಿಯಾದುದು.

ಅಳು–ನಗೆ, ಸಿಟ್ಟು–ಶಾಂತಿ, ಸೋಲು–ಗೆಲವು ಮುಂತಾದ ಪರಿಮಿತ ಉಳ್ಳುದು. ಶೃಂಗಾರ, ಹಾಸ್ಯ, ವೀರ, ಕರುಣ ಮುಂತಾದ ನವರಸಗಳಿಗೆ ನಿಧಿಯಾದುದು. ಧ್ವನಿ ಶಕ್ತಿಯಿಂದ ವಾಚ್ಯ ಸೂಚ್ಯವಾದುದು. ಸೂಕ್ಷ್ಮ ಸಂವೇದಿಯಾದುದು, ರಮಣೀಯವಾದುದು, ಸತ್ಯವಾದುದು, ಸುಖಕರವಾದುದು.

ಲಲಿತಸಾಹಿತ್ಯದಲ್ಲಿ ಹಲವು ರೂಪಗಳು ಬೆಳೆದು ಬಂದಿವೆ. ಕತೆ, ಕಾದಂಬರಿ, ನಾಟಕ, ಕವಿತೆ, ಪ್ರಬಂಧ, ಹರಟೆ ಮುಂತಾದವು. ಇವುಗಳಲ್ಲಿ ಒಂದೊಂದು ರೂಪವು ಮಾನವನ ಮನಸ್ಸಿನ ಮೇಲೆ ಒಂದೊಂದು ವಿಶಿಷ್ಟ ಮುದ್ರೆ–ಯನ್ನು ಒತ್ತುತ್ತದೆ. ಪ್ರತಿಯೊಂದು ರೂಪವು ಹಳೆ–ಹೊಸ ಸಂಪ್ರದಾಯಗಳನ್ನು ಒಳಗೊಂಡಿದೆ. ವಸ್ತು, ತಂತ್ರ, ಶೈಲಿಗಳ ದೃಷ್ಟಿಯಿಂದ ಹೊಸ ಹೊಸ ಪ್ರಯೋಗಗಳು ನಡೆಯುತ್ತಲೇ ಇವೆ. ಇದ್ದ ರೂಪಗಳಲ್ಲಿ ಹೊಸತನವು ಕಾಣಿಸಿಕೊಳ್ಳುವುದರ ಜೊತೆಗೆ ಹೊಸ ಹೊಸ ರೂಪಗಳೂ ಹುಟ್ಟುತ್ತಿವೆ.

ಕತೆ ಹಳೆಯ ಮಾದರಿಯದಿರಬಹುದು, ಹೊಸ ನಮೂನೆಯದಿರಬಹುದು; ಐತಿಹಾಸಿಕ, ಪೌರಾಣಿಕ ಇಲ್ಲವೆ ಕಾಲ್ಪನಿಕ ಇರಬಹುದು; ಭಾರತೀಯ ಸಂಪ್ರದಾಯದ್ದಿರ–ಬಹುದು, ಇಲ್ಲವೆ ಪಾಶ್ಚಾತ್ಯ ಪ್ರಭಾವ ಮುದ್ರೆಯುಳ್ಳುದಿರ–ಬಹುದು. ಕಾದಂಬರಿ, ನಾಟಕ, ಕಾವ್ಯಗಳಲ್ಲಿ ಕಥಾಂಶ ಹೆಚ್ಚಾಗಿ ಬಂದಿರಬಹುದು; ಅಥವಾ ಕತೆಯಲ್ಲಿಯೇ ನಾಟಕೀ–ಯತೆ, ಸಂಭಾಷಣೆ, ಹರಟೆ, ಕಾವ್ಯಗುಣ ಕಾಲು ಚಾಚಿರ–ಬಹುದು. ಲಲಿತ ಸಾಹಿತ್ಯದ ರೂಪಗಳು ಒಂದರಲ್ಲಿ ಒಂದು

ಮಿಶ್ರಣ ಹೊಂದಿರುವುದು ಹಲವಾರು ಸಾರೆ ನಿದರ್ಶನಕ್ಕೆ ಬರುವುದು. ಆದರೆ 'ಕತೆಗಾಗಿ ಕತೆ' ಆಗಿ ಉಳ್ಳ ಕತೆಗಳನ್ನು ಮಾತ್ರ ಕಥಾಮಾಲಿಕೆಯಲ್ಲಿ ಸೇರಿಸಿ ಅವುಗಳ ಪರಿಚಯ ಪಡೆಯುವಾ.

**(೧) ಕಥೆ ಹೇಗೆ ಸೃಷ್ಟಿಯಾಯಿತು? (೨) ಸೃಷ್ಟಿ-ಯಾದ ಕಥಾಜಗತ್ತು ಯಾವುದು ?** ಈ ಎರಡು ಅರ್ಥಗಳನ್ನು ಕಣ್ಣ ಮುಂದೆ ಇಟ್ಟುಕೊಂಡು ಕತೆಯ ವ್ಯಾಖ್ಯೆ, ಲಕ್ಷಣ, ಕಾರಣ, ಪರಿಣಾಮ, ಪ್ರಸಂಗ, ಪ್ರಯೋಜನ, ಉದಾ-ಹರಣೆ, ವ್ಯಾಪ್ತಿ, ವಿಸ್ತಾರ ಮುಂತಾದ ವಿಷಯಗಳಲ್ಲಿ ಸೂಕ್ಷ್ಮ ವಾಗಿ ಅಲ್ಲದಿದ್ದರೂ ಸ್ಥೂಲವಾಗಿ ಕೆಲವು ಮಾತುಗಳನ್ನು ತಿಳಿಯಲು ಯತ್ನಿಸುವುದೂ ಕೂಡ ಇಲ್ಲಿ ಸುಲಭ ಕಾರ್ಯವಲ್ಲ. ಕಥಾಸೃಷ್ಟಿಯ ಬಗ್ಗೆ ಅಲ್ಪ ಸ್ವಲ್ಪ ಪರಿಚಯವನ್ನು ಮಾತ್ರ ಇಲ್ಲಿ ತೀರ ಹಿತಮಿತ ಶೈಲಿಯಲ್ಲಿ ಮಾಡಿಕೊಡಲು ಯತ್ನಿಸ-ಲಾಗಿದೆ.

## ೨. ಕಥೆ ಎಂದರೆ ಏನು ?

**"ಕಥೆ ಎನ್ನುವುದು ಕಥಿತ ವಸ್ತು. ಅದರ ಮುಖ್ಯ ಲಕ್ಷಣ ಕಥನ; ಅದರ ಹಿರಿಯ ಗುಣ ಕಥನದಲ್ಲಿ ಕೌಶಲ"** — ಶ್ರೀನಿವಾಸ.

'ಕಥ' ಸಂಸ್ಕೃತ ಶಬ್ದ, ಅದರ ಅರ್ಥ 'ಹೇಳು'. ಕಥೆ ಎಂದರೆ ಇನ್ನೊಬ್ಬರಿಗೆ ಹೇಳುವಂತಹ ಒಂದು ಘಟನೆ, ಅಥವಾ ಘಟನಾವಳಿ. ನಿತ್ಯವೂ ನಮ್ಮ ಜೀವನದಲ್ಲಿ ನಮ್ಮ ಸುತ್ತಮುತ್ತು

ಅನೇಕ ಘಟನೆಗಳು ನಡೆಯುತ್ತಲೇ ಇರುತ್ತವೆ. ಅವೆಲ್ಲವೂ ಅಷ್ಟು ಮಹತ್ವದ ಸಂಗತಿಗಳಲ್ಲ. ಅವುಗಳಲ್ಲಿ ಹೆಚ್ಚಾಗಿ ತೀರ ಸಾಮಾನ್ಯ ಘಟನೆಗಳಿರುತ್ತವೆ. ಕೆಲವು ಮಾತ್ರ ವಿಶೇಷ ಮಹತ್ವ ಉಳ್ಳವು. ಅವುಗಳನ್ನು ನಾವು ಬೇಗ ಮರೆಯುವದಿಲ್ಲ. ಎರಡನೆಯವರು ತಾವಾಗಿ ಕೇಳದಿದ್ದರೂ ಅಂಥ ಘಟನೆಗಳನ್ನು ಅವರಿಗೆ ನಾವಾಗಿಯೇ ಹೇಳುತ್ತೇವೆ. ಅವೇ ಕಥೆಗಳಾಗುತ್ತವೆ. ಅವುಗಳಲ್ಲಿ ಮನಸ್ಸನ್ನು ಸೆಳೆಯುವ ಅಂಥ ಚಮತ್ಕೃತಿ ಸ್ವಾಭಾವಿಕವಾಗಿಯೇ ಇರುತ್ತದೆ.

ಹೇಳುವಂತಹ ಘಟನೆಯನ್ನು ಹೇಳುವವನು ಸರಿಯಾಗಿ ಹೇಳದಿದ್ದರೆ ಸ್ವಾರಸ್ಯ ಕೆಟ್ಟು ಹೋಗುತ್ತದೆ. ಒಂದು ಮಾತು ಹೆಚ್ಚು ಕಡಿಮೆಯಾದರೆ ಕೇಳುವವನಿಗೆ ಬೇಸರ ಬರುತ್ತದೆ. ಅದರ ಸ್ವಾಭಾವಿಕ ಚಮತ್ಕೃತಿಗೆ ಚ್ಯುತಿ ಬರುತ್ತದೆ. ಆದ್ದರಿಂದ ಹೇಳುವವನ ಹೇಳುವ ಪದ್ಧತಿ ಬಹು ಮುಖ್ಯವಾದುದು.

ಕಥನ ಪದ್ಧತಿ ಚೆನ್ನಾಗಿದ್ದರೆ ವಿಶೇಷ ಘಟನೆಗಳನ್ನು ಸ್ವಾರಸ್ಯಗೊಳಿಸುವುದು ಬಹಳ ಸುಲಭ. ಕುತೂಹಲವನ್ನು ಕೆರಳಿಸುವ ಸ್ವಾಭಾವಿಕ ಶಕ್ತಿಯೇ ಅಂಥ ಘಟನೆಗಳಲ್ಲಿ ಹುದುಗಿರುವುದರಿಂದ ಕಥನ ಪದ್ಧತಿ ಚನ್ನಾಗಿ ಇದ್ದ ಕತೆಗಾರ ಬಹಳ ಪರಿಶ್ರಮ ಪಡಬೇಕಾಗಿಲ್ಲ. ಆದರೆ ಸಾಮಾನ್ಯ ಘಟನೆಗಳನ್ನೂ ಸ್ವಾರಸ್ಯವಾಗಿ ಹೇಳಬೇಕಾದರೆ ತುಂಬಾ ಶ್ರಮಪಡಬೇಕು. ನುರಿತ ಕತೆಗಾರ ಮಾತ್ರ ಸಾಮಾನ್ಯ ಘಟನೆಯನ್ನೂ ತನ್ನ ಸುಂದರ ಕಥನ ಕೌಶಲ್ಯದಿಂದ ಕೇಳುವವನ ಮನ ತುಂಬುವಂತೆ ಹೇಳಬಲ್ಲ. ಆದ್ದರಿಂದ ಕತೆಯ ಹಿರಿಯಗುಣ ಕಥಾವಸ್ತುವಿನ

ಮೂಲಭೂತ ಆಕರ್ಷಣೆಗಿಂತ ಕಥನದಲ್ಲಿ ಕಾಣುವ ಕೌಶಲ್ಯ-ವನ್ನೇ ಅವಲಂಬಿಸಿರುತ್ತದೆ.

**೩. ಕಥೆ ಹೇಗೆ ಹುಟ್ಟುತ್ತವೆ ?**

ಕಥಾಸೃಷ್ಟಿಗೆ ಈ ಮೂರು ವಸ್ತುಗಳು ಆವಶ್ಯಕ : (೧) **ಕಥಾವಸ್ತು** (೨) **ಕತೆಗಾರ** (೩) **ಕೇಳುವವ** (ಓದುವವ) ಇವುಗಳಲ್ಲಿ ಒಂದೇ ಒಂದು ಇದ್ದರೂ ಕತೆ-ಯಾಗದು; ಒಂದೇ ಒಂದು ಇಲ್ಲದಿದ್ದರೂ ಕತೆಯಾಗದು. ಈ ಮೂರು ಬೇಕೇ ಬೇಕು. ಹೇಳುವಂತಹದನ್ನು ಹೇಳುವವನು ಹೇಳಿದರೆ ಕೇಳುವವನು ಕೇಳಿಯೇ ಕೇಳುತ್ತಾನೆ. ಕೇಳದಂತಹ-ದನ್ನು, ಕೇಳಿರದಂತಹದನ್ನು ಹೇಳಿದರೂ ಕೇಳುತ್ತಾನೆ. ಯಾರೂ ಹೇಳದಂತಹ, ಹೇಳಿರದಂತಹ – ಈ ಮೊದಲೆಂದೂ ತಾನು ಕೇಳಿರದಂತಹ ಕತೆಯಾದರೆ ಹೆಚ್ಚು ಹುರುಪಿನಿಂದ ಕೇಳು-ತ್ತಾನೆ. ಆಗ ಹೇಳುವವನಿಗೂ ಹುರುಪು; ಹೇಳಿದ ಕತೆಗೂ ಬೆಲೆ ಬರುತ್ತದೆ. ಕುತೂಹಲ, ಹುರುಪು, ನಗೆ—ನಲಿವು, ಆನಂದ ಇಬ್ಬರಲ್ಲಿಯೂ ಮೂಡಿ ಮುಳುಗಬೇಕು. ಆದರೆ, ಕೇಳುವವನೇ ಇಲ್ಲದಿದ್ದರೆ ಕತೆಗಾರ ಯಾರ ಮುಂದೆ ಕತೆ ಹೇಳಬೇಕು ? ಸುಮ್ಮನೆ ಬರೆದು ಇಡಬೇಕೆ ? ಬರೆದು ದನ್ನೂ ಯಾರೂ ಓದದಿದ್ದರೆ ?

ಇತ್ತೀಚೆಗೆ ಸಾಹಿತ್ಯದ ಲಕ್ಷಣಕಾರರು ಈ ಮಾತನ್ನು ನಿರ್ಣಯಿಸಿದ್ದಾರೆ. ರಸಾನಂದವೇ ಲಲಿತ ಸಾಹಿತ್ಯದ ಪರಮ ಗುರಿ. ರಸಾನಂದ ಉಂಟಾಗುವದು, ಮೂಲತಃ ಮೂಡುವುದು,

ಕೃತಿಯಲ್ಲಿ ಅಲ್ಲ; ಕೃತಿಕಾರನಲ್ಲಿ ಅಲ್ಲ; ಕೃತಿಯನ್ನು ಓದುವ, ಕೇಳುವ, (ದೃಶ್ಯ ಕಾವ್ಯವಾಗಿದ್ದರೆ) ನೋಡುವ ಸಾಮಾಜಿಕನಲ್ಲಿ ! –ಎಂದು. ಕತೆಯೂ ಲಲಿತ ಸಾಹಿತ್ಯದ ಒಂದು ರೂಪವಾದ್ದರಿಂದ ಅದರ ಎಲ್ಲ ಲಕ್ಷಣಗಳು ಇದಕ್ಕೂ ಅನ್ವಯಿಸುವದು ಸ್ವಾಭಾವಿಕ. ಅದ್ದರಿಂದ ಕಥಾಸೃಷ್ಟಿಯ ಮೂರು ವಸ್ತುಗಳಲ್ಲಿ ಸಾಮಾಜಿಕನ ಪಾತ್ರವಹಿಸಿದ ಕತೆ ಕೇಳುವ (ಓದುವ) ವ್ಯಕ್ತಿಯೇ ಮುಖ್ಯವಸ್ತು. ಅವನ ಅಸ್ತಿತ್ವದಿಂದಲೇ ಕಥಾನಿರ್ಮಾಣ; ಅವನಿಗಾಗಿಯೇ ಕಥಾಸೃಷ್ಟಿ.

ಕಥೆ ಕೇಳುವವನ (i) ಜ್ಞಾನದ ಮಟ್ಟ (ii) ಅಭಿರುಚಿಯ ಪದ್ಧತಿ (iii) ನಂಬಿಗೆ-ನಡಾವಳಿ (iv) ಸಂಸ್ಕಾರದ ನೆಲೆಬೆಲೆ (v) ಬದುಕಿನ ಕಾಲಮಾನ, ಪರಿಸ್ಥಿತಿ, ಪರಿಸರಗಳ ಅರಿವು (vi) ಮಾನಸಿಕ ಸ್ಥಿತಿಗತಿ–ಇವುಗಳನ್ನು ಕತೆಗಾರ ಸರಿಯಾಗಿ ಗಮನಿಸಿ ಗ್ರಹಿಸದೆ ಹೋದರೆ ತನ್ನ ಕಾರ್ಯದಲ್ಲಿ ಸಾಫಲ್ಯವನ್ನು ಪಡೆಯಲಾರ. 'ತಾನು ಯಾರಿಗಾಗಿ ಕತೆ ಬರೆಯುತ್ತೇನೆ? ಏಕೆ ?' ಎಂಬ ಅರಿವು ಇರದಿದ್ದರೆ, ಕತೆ ಕೇಳುವವನನ್ನು (ಓದುವವನನ್ನು) ಅಲಕ್ಷಿಸಿ ಕತೆ ರಚಿಸಿದರೆ, ಕತೆಗಾರನ ಶ್ರಮ ವ್ಯರ್ಥವಾಗುವ ಸಂಭವವಿದೆ.

ಕಾಲಕ್ಕೆ ತಕ್ಕ ಕಥಾಸೃಷ್ಟಿ ಸಾಹಿತ್ಯದಲ್ಲಿ ನಡೆದು ಬಂದದಾರಿ. **ಕತೆ ಕೇಳುವ ಸಾಮಾಜಿಕ ಶಕ್ತಿ ತನಗೆ ಬೇಕಾದ ಕತೆಗಾರನನ್ನು ಸೃಷ್ಟಿಸುತ್ತದೆ. ತನ್ಮೂಲಕ ಕತೆಗಳನ್ನೂ ಸೃಷ್ಟಿಸುತ್ತದೆ.**

## ೧. ಕಥಾವಸ್ತು

(೧) "ಕಥೆಯ ಮುಖ್ಯ ಘಟನೆಯನ್ನು ಯಾರ ಮುಂದೆ ಹೇಳಿದರೂ ಅದರ ಸಂಪೂರ್ಣ ಸಂಗತಿಯನ್ನು ಕೇಳಿಯೇ ಬಿಡಬೇಕೆನ್ನುವಂತಹ ಕುತೂಹಲವನ್ನು ಕೆರಳಿಸ-ಬೇಕು. ಯಾವ ಕತೆಯಾದರೂ ಒಂದು ಪ್ರಸಂಗದ ವಿವರಣೆ ಯಾಗಿರುವುದು. ಈ ವಿವರಣೆಯನ್ನು ಅರಿತುಕೊಳ್ಳಬೇಕೆಂಬ ಜಿಜ್ಞಾಸೆ ವಾಚಕರಲ್ಲಿ ಎಷ್ಟು ತೀವ್ರತರವಾಗುವುದೋ ಅಷ್ಟು ಕಥಾವಸ್ತು ಒಳ್ಳೆಯದೆಂದು ಹೇಳಬೇಕು"—ಮಿರ್ಜಿ.

(೨) "ಇನ್ನೂ ಒಳ್ಳೆಯ ಕಥಾವಸ್ತುವಿನ ಲಕ್ಷಣ-ವೆಂದರೆ ಅದರಲ್ಲಿ ತುಂಬ ಹೋರಾಟವಿರಬೇಕು. ಒಂದು ಸಂಗತಿಯನ್ನು ಕಥಾವಸ್ತುವಾಗಿ ಆಯ್ದುಕೊಳ್ಳಬೇಕಾದರೆ ಮೊದಲು ಲೇಖಕನು ಅದರಲ್ಲಿಯ ಹೋರಾಟದ ಪ್ರಮಾಣ-ವನ್ನು ಅರಿತುಕೊಳ್ಳಬೇಕು."—ಮಿರ್ಜಿ.

(೩) ಕಥಾವಸ್ತುವನ್ನು ಕತೆಗಾರ ಸ್ಪರ್ಶಮಾಡಿದೊಡನೆಯೆ ಕಥನಕೌಶಲ ಹಣಿಕಿ ಹಾಕುತ್ತದೆ. **ಹೋರಾಟದಲ್ಲಿ ಕತೆಯ ಉಗಮವಿರುವುದರಿಂದ ಅದನ್ನು ಕತೆಗೆ ಬೀಜವೆಂದು ತಿಳಿಯಬಹುದು. ಆದರೆ ಈ ಬೀಜ ನೊಳಕೆ-ಯೊಡೆದು ಬೆಳವಣಿಗೆ ಹೊಂದುವುದು ಕಥನ ಕೌಶಲದಿಂದ.**

(೪) 'ಕಥಾವಸ್ತುವಿನಲ್ಲಿ ಪ್ರಸಂಗ, ಸನ್ನಿವೇಶ, ಪಾತ್ರ ರಚನೆ, ಸಂಭಾಷಣೆ, ವರ್ಣನೆ, ವಿವರಣೆ ಅತ್ಯಂತ ಮಹತ್ವದ ಅಂಶಗಳು. ಇವುಗಳಿಂದಲೇ ಕತೆ ನಿರ್ಮಾಣವಾಗುತ್ತದೆ.

ಹೋರಾಟವುಳ್ಳ ಪ್ರಸಂಗವನ್ನು ಆಯ್ದುಕೊಳ್ಳಬೇಕು. ಅನೇಕ ಪ್ರಸಂಗ (ಘಟನೆ)ಗಳಿದ್ದರೆ ಅವುಗಳನ್ನು ಒಂದರ ತರುವಾಯ ಒಂದು ಹೊಂದಿಕೊಂಡು ಬರುವಂತೆ, ಹೇಳುವ ಕ್ರಮದಲ್ಲಿ ಏಕ-ಸೂತ್ರತೆಯನ್ನು ಸಾಧಿಸುವ ಏರ್ಪಾಟು ಮಾಡಿಕೊಳ್ಳಬೇಕು. ಪ್ರಸಂಗ ಹುಟ್ಟುವುದು ಪಾತ್ರಗಳಿಂದ. ಹೋರಾಟದ ಇಮ್ಮಗ್ಗಲಿಗೂ ನಿಲ್ಲುವವು ಪಾತ್ರಗಳು, ಪಾತ್ರಬಣಗಳು. ಆದ್ದರಿಂದ ಕಥಾನಕಕ್ಕಿಂತ ಪಾತ್ರದರ್ಶನಕ್ಕೆ ಹೆಚ್ಚು ಮಹತ್ವವಿದೆ. ವ್ಯಕ್ತಿಗಳಿಂದ ಕಥಾನಕ ಹುಟ್ಟುತ್ತದೆ, ಅಲ್ಲದೆ ಕಥಾನಕದಿಂದ ವ್ಯಕ್ತಿಗಳು ನಿರ್ಮಾಣವಾಗುವುದಿಲ್ಲ. ಆದರೆ ಪಳಗಿದ ಕತೆಗಾರ ಮಾತ್ರ ಕಥಾನಕದಿಂದ ವ್ಯಕ್ತಿಗಳನ್ನು ನಿರ್ಮಿಸಬಲ್ಲ. ಪಾತ್ರ ರಚನೆ ಕಥನಚಮತ್ಕೃತಿಗಿಂತಲೂ ಕಲಾದೃಷ್ಟಿಯಿಂದ ಮಿಗಿ-ಲಾದುದು. ಕುಶಲಪಾತ್ರ ಪ್ರದರ್ಶನವನ್ನು ಸಾಧಿಸಿದ ಕೃತಿಗೇ ಶ್ರೇಷ್ಠಸ್ಥಾನ. ಆದ್ದರಿಂದ ವ್ಯಕ್ತಿಗಳನ್ನು ಕಣ್ಣುಮುಂದೆ ಇಟ್ಟುಕೊಂಡು ಅವರ ಸ್ವಭಾವ ಚಿಂತನೆಯೊಂದಿಗೆ ಆಯಾ ವ್ಯಕ್ತಿಗಳ ಸಂಬಂಧ ಜೋಡಿಸುತ್ತ ಹೋದರೆ ತನ್ನಿಂದ ತಾನೇ ಹೊಂದಿಕೊಳ್ಳುವುದು.’

(೫) ಕಥೆ ಕೇಳುವ ಸಾಮಾಜಿಕ ಶಕ್ತಿಯು ಅಭಿರುಚಿಗೆ ತಕ್ಕ ಕಥಾವಸ್ತುವನ್ನು ಆಯ್ದುಕೊಳ್ಳುವಲ್ಲಿಯೇ ಜಾಣ್ಮೆ ಇದೆ. ಇಲ್ಲದಿದ್ದರೆ ಕಥಾವಸ್ತು ಬದುಕಲಾರದು.

## ೨. ಕತೆಗಾರ

ಕತೆಗೆ ತಾಯಿತಂದೆ ಕತೆಗಾರ. ಕತೆಯ ಮೇಲ್ಮೆ ಕತೆಗಾರನ ಮೇಲ್ಮೆಯೇ ಆಗಿದೆ. ಕೃತಿಕಾರನ ವ್ಯಕ್ತಿತ್ವಕ್ಕೆ

ಕನ್ನಡಿ ಹಿಡಿಯುವುದು ಅವನ ಕೃತಿ. ಹಿರಿಯ ಕತೆ ಹುಟ್ಟ-ಬೇಕಾದರೆ ಹಿರಿಯ ಬಾಳು ಬದುಕಿದ ಕತೆಗಾರನೇ ಬೇಕು. ಉಳಿದ ಎಲ್ಲ ಕಲಾಕಾರರಂತೆ ಕತೆಗಾರನೂ ಹುಟ್ಟಿನಿಂದಲೇ ಕೆಲವು ಲಕ್ಷಣಗಳನ್ನು ಪಡೆದು ಬಂದಿರಬೇಕು. ಸತತ ಪರಿಶ್ರಮದಿಂದ ಉಪಾಸನೆ, ಅಭ್ಯಾಸ, ಆಸಕ್ತಿ, ಅಭಿರುಚಿ ಇವುಗಳನ್ನು ಬೆಳೆಸಿಕೊಳ್ಳಬೇಕು. ಉತ್ತಮ ಸಂಸ್ಕಾರ ಹೊಂದಬೇಕು. ಪ್ರತಿಭೆಯ ಪ್ರಕಟನ ಸಾಮರ್ಥ್ಯದ ಸುಂದರ ಸಮಯಕ್ಕಾಗಿ ಚಾತಕ ಪಕ್ಷಿಯಂತೆ ದಾರಿಕಾಯಬೇಕು.

ಕತೆಗಾರನ ನೈಪುಣ್ಯ (i) ಕಥಾವಸ್ತುವಿನ ಆಯ್ಕೆಯಲ್ಲಿ (ii) ಪಾತ್ರ ರಚನಾ ಸಂವಿಧಾನದಲ್ಲಿ (iii) ಪ್ರಸಂಗಗಳ ಏಕ-ಸೂತ್ರತೆಯಲ್ಲಿ, ಘಟನೆಯ ಪ್ರಖರತೆಯಲ್ಲಿ, ಸನ್ನಿವೇಶಗಳ ವಿವರಣೆಯಲ್ಲಿ (iv) ಕಥನಕೌಶಲ್ಯದಲ್ಲಿ, ಶೈಲಿಯಲ್ಲಿ (v) ಕೊನೆಯವರೆಗೆ ಕುತೂಹಲ ಕಾಯ್ದಿಡುವ ತಂತ್ರದಲ್ಲಿ-ಕಾಣಬಹುದು. ಆದರೂ ಅವನ ತಂತ್ರ ಶೈಲಿಗಳು ಮುಖ್ಯ ವಾದವುಗಳು.

## (ಅ) ಕಥನತಂತ್ರ

(i) ಕತೆಗಾರ ಕ ಥ ನ ತ ೦ ತ್ರ ವ ನ್ನು ಬಲ್ಲವನಾಗಿರ-ಬೇಕು. ಯಾವ ವಿಷಯವನ್ನು ಮೊದಲು ಹೇಳಬೇಕು, ಯಾವುದನ್ನು ಮಧ್ಯದಲ್ಲಿ ಹೇಳಬೇಕು, ಯಾವುದನ್ನು ಕೊನೆಗೆ ಹೇಳಬೇಕು – ಎಂಬ ವಿಷಯವನ್ನು ತಿಳಿದವನಾಗಿರ-ಬೇಕು.

(ii) ಕುತೂಹಲ ಕಾಯ್ದಿಡುವ, ಸ್ವಲ್ಪದರಲ್ಲಿ ಬಹಳ ಹೇಳುವ, ಬೇಸರ ಬರಿಸದಿರುವ, ಪ್ರಿಯವಾದ ವಸ್ತುಗಳನ್ನು ಹಿಗ್ಗಲಿಸಿ ಹೇಳುವ, ಮನದಲ್ಲಿ ಮೂಡಿನಿಂತು ಎಂದೂ ಮರೆಯಲಾರದಂತೆ ಮಾಡುವ, ತೀವ್ರ ಪರಿಣಾಮ ಬೀರುವ, ಶಾಶ್ವತ ಸಂಸ್ಕಾರ ನೀಡುವ, ಉದಾತ್ತೀಕರಣವನ್ನು ಸಾಧಿಸುವ, ಕೊನೆಗೆ ಆನಂದವನ್ನು ದಯಪಾಲಿಸುವ ಕಾರ್ಯದಲ್ಲಿ ಬರವಣಿಗೆಯನ್ನು ಬಲ್ಲಂತೆ ಹೊರಳಿಸುವ ಶಕ್ತಿಯನ್ನು ತಂತ್ರದಿಂದ ಪಡೆಯುವದು ಸಾಧ್ಯವಿದೆ.

(iii) ಕತೆಯ ಪ್ರಾರಂಭದಲ್ಲಿ ಜಿಜ್ಞಾಸೆ, ಮಧ್ಯದಲ್ಲಿ ಉತ್ಕಟತೆ, ಕೊನೆಯಲ್ಲಿ ವಿಸ್ಮಯ – ಉಂಟಾಗುವಂತೆ ಕತೆ ಕಟ್ಟಬೇಕು. ಪ್ರಾರಂಭದಲ್ಲಿ ಒಂದು ಸಮಸ್ಯೆಯನ್ನು ಹುಟ್ಟಿಸಿ, ಮಧ್ಯದಲ್ಲಿ ಅದನ್ನು ವಿಕೋಪಕ್ಕೆ ಒಯ್ದು, ಕೊನೆಯಲ್ಲಿ ಅದನ್ನು ಒಮ್ಮೆಲೆ ಬಿಡಿಸಿತೋರಿಸಬೇಕು.

(iv) ಸುಂದರ ವಸ್ತುಗಳ ದರ್ಶನವನ್ನು ಒಮ್ಮೆಲೆ ಮಾಡಿಸಬಾರದು. ಕ್ರಮವಾಗಿ ಗೋಚರಿಸುವಂತೆ ಮಾಡಿ ಸಂಯಮಶೀಲತೆಯನ್ನು ಅನುಸರಿಸಬೇಕು.

(v) ಪಾತ್ರಗಳ ಚಿಕ್ಕಪುಟ್ಟ ಕಾರ್ಯದಲ್ಲಿಯೂ ಕಾರಣ ಸ್ಪಷ್ಟವಾಗಿರಬೇಕು.

## (ಬ) ಕಥನಶೈಲಿ

ಸನ್ನಿವೇಶಗಳಿಗೆ ತಕ್ಕ ವರ್ಣನೆ, ವಿವರಣೆ, ಸಂಭಾಷಣೆ ಹೆಣೆಯುವುದು; ಪಾತ್ರಗಳು ಕಣ್ಣುಮುಂದೆ ಕುಣಿಯುವಂತೆ

ಶಬ್ದ ಚಿತ್ರಗಳನ್ನು ಬಳಸುವುದು; ದೇಶಿ–ಮಾರ್ಗಗಳ ಭಾಷಾ—ಶಕ್ತಿಯನ್ನು ಕಂಡುಹಿಡಿದು ತಕ್ಕ ಸ್ಥಳದಲ್ಲಿ ಅವುಗಳ ಉಪ-ಯೋಗ ಪಡೆಯುವದು; ಶುದ್ಧ ಸರಳ ಸಹಜ ವಾಕ್ಯಸರಣಿ-ಯನ್ನು ಅನುಸರಿಸುವದು; ಗಾದೆ ಮಾತು, ನಾಣ್ಣುಡಿ, ಜಾಣ್ಣುಡಿ, ಧ್ವನಿಶಕ್ತಿಯುಳ್ಳ ಶಬ್ದಗಳನ್ನು ಬಳಸುವುದು ಮುಂತಾದ ಬರವಣಿಗೆಯ ಆಕರ್ಷಣೆಗೆ ಬೇಕಾದ ಕ್ರಮಗಳನ್ನು ಕೈಕೊಳ್ಳುವುದು; ಪ್ರಭುಸಮ್ಮಿತ, ಮಿತ್ರಸಮ್ಮಿತ, ಕಾಂತಾ-ಸಮ್ಮಿತಗಳಲ್ಲಿ ಕೊನೆಯದನ್ನೇ ಅನುಸರಿಸುವುದು; ಲಲಿತ, ಮಧುರ, ಹಾಸ್ಯಪೂರಿತ ಬರವಣಿಗೆಯನ್ನು ಬಳಸುವುದು, ಶೈಲಿಯ ಉತ್ತಮ ನಿದರ್ಶನಗಳು.

### (i) ಶೈಲಿ ಎಂದರೇನು ?

**'ಸಾಹಿತ್ಯದ ಸಲಕರಣೆಯೆಂದರೆ ಪದ ಮತ್ತು ಅರ್ಥ, ಅವುಗಳ ಕಲಾತ್ಮಕ ಸಂಯೋಜನೆಯಿಂದ ಕಾವ್ಯಾರ್ಥ ವನ್ನು ಕವಿ ಕಡೆದಿಡುತ್ತಾನೆ. ಈ ಕಲಾತ್ಮಕ ಸಂಯೋ ಜನೆಗೆ ಬಂಧ, ಶೈಲಿ ಎನ್ನುತ್ತಾರೆ'—ಬ. ಹೆ. ಶ್ರೀ.**

### (ii) ಶೈಲಿ ವ್ಯಕ್ತಿಗತವಾದುದು :

ವ್ಯಕ್ತಿಗೊಂದು ಶೈಲಿ ಇದ್ದೇ ಇರುತ್ತದಾದರೂ ತನ್ನದೇ ಶೈಲಿಯನ್ನು ನಿರ್ಮಾಣ ಮಾಡಿಕೊಂಡ ವ್ಯಕ್ತಿ ಸಣ್ಣ ವ್ಯಕ್ತಿ-ಯಲ್ಲ. ಸಾಮಾನ್ಯರಿಗೆ ತಮ್ಮದೇ ಶೈಲಿ ಇಲ್ಲವೆಂದಲ್ಲ. ಅದು ಪರರ ಮೇಲೆ ಪ್ರಭಾವ ಬೀರಿದರೆ ಮಾತ್ರ ಆದರ್ಶ ಶಕ್ತಿಯನ್ನು ಪಡೆಯುತ್ತದೆ. ಗಾಂಧೀಟೋಪಿ, ನೆಹರು ಶರ್ಟ ಎನ್ನುತ್ತೇವೆ.

ಟೊಪ್ಪಿಗೆಯು, ಶರ್ಟಿನ ವಿಶಿಷ್ಟ ಮಾದರಿಯಿಂದ ಆ ಹೆಸರು ಬಂದಿದೆ. ಹಾಗೆಯೇ ಸಾಹಿತ್ಯದಲ್ಲಿಯೂ ಪಂಪನ ಶೈಲಿ, ಕುವೆಂಪು ಶೈಲಿ, ಬೇಂದ್ರೆ ಶೈಲಿ ಎಂದು ಹೇಳುತ್ತೇವೆ. ವ್ಯಕ್ತಿಗತವಾದ ವಿಶಿಷ್ಟ ಅಭಿವ್ಯಕ್ತಿಯೇ ಸಾಹಿತ್ಯದಲ್ಲಿ ಶೈಲಿ-ಯಾಗಿ ಪರಿಣಮಿಸುತ್ತದೆ.

(iii) **ರೂಪವೂ ಒಮ್ಮೊಮ್ಮೆ ಶೈಲಿಯಾಗಿ ನಿಲ್ಲುತ್ತದೆ :**

ಚಂಪೂಶೈಲಿ, ನಾಟಕೀಯ ಶೈಲಿ, ಕಥನ ಶೈಲಿ ಇತ್ಯಾದಿ. ವರ್ಣನ ಶೈಲಿ, ಸಂಭಾಷಣ ಶೈಲಿ, ಗಂಭೀರ ಗದ್ಯ ಶೈಲಿ, ಸರಸ ಪದ್ಯ ಶೈಲಿ ಇತ್ಯಾದಿ. ರಸವೂ ಒಮ್ಮೊಮ್ಮೆ ಶೈಲಿಯಾಗಿ ನಿಲ್ಲುತ್ತದೆ. ಶೃಂಗಾರಶೈಲಿ, ವೀರಶೈಲಿ, ಹಾಸ್ಯ ಶೈಲಿ ಇತ್ಯಾದಿ.

(iv) Style is the man :

ಶೈಲಿಯೇ ಮನುಷ್ಯನ ವ್ಯಕ್ತಿತ್ವವನ್ನು ಹೇಳುತ್ತದೆ. ಕತೆಗಾರ ಮೊದಲು ತನ್ನ ವ್ಯಕ್ತಿತ್ವವನ್ನು ನಿರ್ಮಾಣ ಮಾಡಿ-ಕೊಳ್ಳಬೇಕು. ಆ ಮೇಲೆ ಅವನು ನಡೆದ ದಾರಿಯೇ ಅವನ ಶೈಲಿಯಾಗಿ ನಿಲ್ಲುತ್ತದೆ. ಉದಾ : ಮಾಸ್ತಿಯವರ (ಶ್ರೀನಿವಾಸ) ಶೈಲಿ, ಆನಂದರ ಶೈಲಿ ಎಂದು ಕತೆಗಾರರ ಹೆಸರನ್ನೇ ಅವರ ಕೃತಿಗಳ ವಿಶಿಷ್ಟ ಪಡಿಯಚ್ಚಿಗೆ ಹೇಳುವುದಿಲ್ಲವೆ? ಏನೇ ಇರಲಿ, ಕತೆಗಾರ ಮನಮೋಹಕವಾದ, ಸತ್ಯದ ಜಾಡನ್ನು ಬಿಡದ, ರಸಾನಂದವನ್ನು ಹುಟ್ಟಿಸುವ ಶೈಲಿಯನ್ನು ತನ್ನ ಕತೆಗಳಿಗೆ ಬಳಸಬೇಕು.

'ಉತ್ತಮ ಕತೆಯನ್ನು ಜನತೆಗೆ ದಯಪಾಲಿಸುವ ಕತೆ-ಗಾರ ಸಾಹಿತ್ಯದ ಬರಹರೂಪದಲ್ಲಿ ತನ್ನ ಶಕ್ತಿಯನ್ನು ತೋರಿಸ-

ಬೇಕಾದುದರಿಂದ ಕತೆ ಹೇಳುವ ಪದ್ಧತಿ, ಕತೆ ಕಟ್ಟುವ ಪದ್ಧತಿಗಳನ್ನು ತಿಳಿದುಕೊಂಡು, ಶೈಲಿ ತಂತ್ರಗಳ ಮೂಲಕ ತನ್ನ ಕೈಚಳಕವನ್ನು ತೋರಿಸಿ, ಸುಂದರ ಕಥನಕೌಶಲ್ಯದಿಂದ ತನ್ನ ಪ್ರತಿಭಾ ಮುದ್ರೆಯೊತ್ತಿ, ಸೃಷ್ಟಿಯಲ್ಲಿ ಅಡಗಿದ ಸತ್ಯವನ್ನು ಕಲ್ಪನೆಯ ಬೆಳಕಿನಲ್ಲಿ ಛಾಯಾಚಿತ್ರದಂತೆ ಪ್ರದರ್ಶನ ಮಾಡಬೇಕು.'

## ೩. ಕತೆ ಕೇಳುವವ (ಓದುವವ)

ಸಾಮಾಜಿಕ (ಸಮಾಜದ ಪ್ರತಿನಿಧಿ) ನ ಪಾತ್ರವಹಿಸಿದ ಓದುಗನು (ಕೇಳುವವನು) ಸರ್ವಸ್ವತಂತ್ರನೆ ? ಅವನು ಮಾಡತಕ್ಕ ಕರ್ತವ್ಯ ಕರ್ಮಗಳಿಲ್ಲವೆ ? ಕತೆಗಾರನಂತೆ ಅವನಿಗೂ ಒಂದು ವಿಶಿಷ್ಟ ಯೋಗ್ಯತೆ ಬೇಕು. ಕತೆಗಳನ್ನು ಹೇಳುತ್ತ ಹೋದಂತೆ ಹೂಂಗುಟ್ಟಬೇಕು. ಆಸಕ್ತಿ ವಹಿಸಿ ಕೊನೆಯುವರೆಗೆ ಕೇಳಬೇಕು. ಕೇಳಿದ ಕತೆಯ ಸ್ವಾರಸ್ಯವನ್ನು ಬಣ್ಣಿಸಿ ಹೇಳಲು ಶಕ್ತನಾಗಬೇಕು. ನಿಜವಾದ ರಸಿಕನೆ ನಿಜವಾದ ಕತೆಯನ್ನು ಕೇಳಬಲ್ಲ; ಕತೆಯ ಇಲ್ಲವೆ ಕತೆಗಾರನ ಯೋಗ್ಯತೆಯನ್ನು ಒರೆಗೆ ಹಚ್ಚಬಲ್ಲ. ಆತನ ಆನಂದಾನುಭವವೇ ಸಂಜೀವಿನಿ ಶಕ್ತಿಯನ್ನು ಹೊಂದಿರುತ್ತದೆ. ಅದು ಕತೆಯನ್ನೂ ಬದುಕಿಸಬಲ್ಲುದು; ಕತೆಗಾರನನ್ನೂ ಬದುಕಿಸಬಲ್ಲುದು.

ಕತೆ ಲಿಪಿಯ ಆಶ್ರಯ ಹೊಂದಿ ಶ್ರುತಿಯಿಂದ ಕೃತಿಗಿಳಿಸಲ್ಪಟ್ಟ ನಂತರ ಅದಕ್ಕೆ ಸಾಹಿತ್ಯದ ಪಟ್ಟವೇರುವ ಭಾಗ್ಯ ಬಂತು. ಅದರ ಹೊರಮೈ ಒಳಮೈ ವ್ಯತ್ಯಾಸಗೊಂಡವು; ಸಾಧಾರಣೆ

ಕಂಡವು. ಶೈಲಿ ತಂತ್ರ ಪಾತ್ರರಚನೆಗಳ ಮೂಲಕ ತೀವ್ರ ಪ್ರಗತಿ ಮೈದೋರಿತು. ಸರಳತೆಯಿಂದ ಸಂಕೀರ್ಣತೆಯ ಕಡೆಗೆ, ಸುಲಭತೆಯಿಂದ ಗೂಢತೆಯ ಕಡೆಗೆ ನೈಸರ್ಗಿಕತೆಯಿಂದ ಕೃತ್ರಿಮತೆಯ ಕಡೆಗೆ ಧಾವಿಸುತ್ತ ಬಂತು. ಪರಿವರ್ತನ ಕಾರ್ಯ ಈಗ ಭರದಿಂದ ಸಾಗಿದೆ. ಮಾನವ ಜೀವನ ದಿನಗಳೆದಂತೆ ಹೆಚ್ಚು ಜಟಿಲವಾಗುತ್ತ ನಡೆದಿರುವಂತೆ ಸಾಹಿತ್ಯವೂ ಕೂಡ ಆ ಮಾರ್ಗವನ್ನೇ ಅನುಸರಿಸುತ್ತಿದೆ. ಆದ್ದರಿಂದ ಕತೆಗಾರನಲ್ಲಿ, ಕತೆಯಲ್ಲಿ ಬಹಳಷ್ಟು ವ್ಯತ್ಯಾಸಗಳು ಕಂಡುಬರುತ್ತಿವೆ. ಅದರಂತೆ ಕತೆ ಕೇಳುವವನಲ್ಲಿಯೂ ವ್ಯತ್ಯಾಸಗಳು ತೋರದಿರಲಿಲ್ಲ. ಹಿಂದಿನ ಕಾಲಕ್ಕಿಂತ ಇಂದಿನ ಕಾಲದ ಸಹೃದಯುದ ಕತೆ ಕೇಳುವ ರಸಿಕ (ಇಲ್ಲವೆ ವಾಚಕ) ಲೋಕದ ಮೇಲೆ ತನ್ನ ಮಟ್ಟವನ್ನು ಎತ್ತರಿಸಿಕೊಳ್ಳುವ ಹೆಚ್ಚಿನ ಜವಾಬುದಾರಿ ಬಿದ್ದಿದೆ.

ಇಂದಿನ ವಾಚಕ (ಸಾಮಾಜಿಕ) ಚನ್ನಾಗಿ ಓದು ಬರಹ ಬಲ್ಲವನಾಗಿರಬೇಕು. ಹಳೆಯ ಹೊಸ ಭಾಷಾ ಪರಿಚಯ ಪಡೆದವನಾಗಿರಬೇಕು. ಅಲ್ಲದೆ, ಕನ್ನಡದ ಜೊತೆಗೆ ರಾಷ್ಟ್ರಭಾಷೆ, ಸೋದರಭಾಷೆ, ಅಂತರರಾಷ್ಟ್ರೀಯ ಭಾಷೆಗಳನ್ನು ಅಲ್ಪಸ್ವಲ್ಪವಾದರೂ ತಿಳಿದುಕೊಂಡಿರಬೇಕು. ತುಲನಾತ್ಮಕ ಅಭ್ಯಾಸ ಮಾಡಿರಬೇಕು. ಅಂದರೇನೆ ತನ್ನ ಭಾಷೆಯ ಸಾಹಿತ್ಯದ ಯೋಗ್ಯತೆಯನ್ನು ಗುರುತಿಸಲು ಸಮರ್ಥನಾಗುತ್ತಾನೆ.

ಭಾಷಾಪರಿಣತಿಯನ್ನು ಪಡೆಯುವುದರ ಜೊತೆಗೆ ತಂತ್ರಜ್ಞಾನವನ್ನು ಹೆಚ್ಚಿಸಿಕೊಳ್ಳುವುದು, ವಿಮರ್ಶಾತತ್ವಗಳನ್ನು

ತಿಳಿದಿರುವುದು, ಉತ್ತಮಿಕೆಯ ಪರಿಚಯ ಪಡೆದಿರುವುದು ಮುಂತಾದ ಯೋಗ್ಯತಾ ಸಂಪಾದನೆ ಇಂದಿನ ವಾಚಕನಿಗೆ ಅನಿವಾರ್ಯ. ಆಗ ಅವನಲ್ಲಿ ರಸಗ್ರಹಣಶಕ್ತಿ, ಆಸ್ವಾದನ ಶಕ್ತಿ ಪ್ರಕಟವಾಗಿ ಅವನು ತನ್ನ ಸ್ಥಾನಕ್ಕೆ ಮರ್ಯಾದೆ ತರುತ್ತಾನೆ.

---

# ಜನಪದ ಕಥಾಸೃಷ್ಟಿ

## ೧. ಹೇಗೆ ಹುಟ್ಟಿತು ?

ನೆಲ, ನೀರು, ಗಾಳಿ, ಬೆಳಕು, ಸಸ್ಯಗಳ ಬೆನ್ನ ಹಿಂದೆಯೇ ಜಾನಪದ ಸೃಷ್ಟಿ. ಭೂಮಿಯ ಮೇಲೆ ಹುಟ್ಟಿಬಂದ ಜಾನಪದ ಜಗದ ಮೊದಲ ಮಾನವ ಮಾತನಾಡಲು ಕಲಿತುದೇ ಒಂದು ಶ್ರೇಷ್ಠಸಿದ್ಧಿ. ಮಾತು ಕಲಿತ ಮಾನವ ಮಾತಿನ ಮಹಿಮೆ-ಯನ್ನು ಅರಿಯದೆ ಸುಮ್ಮನಿರುವುದು ಸಾಧ್ಯವೆ? ಆತನ ಸತತ ಪ್ರಯತ್ನದ ಫಲವಾಗಿ ಮಾತು ಸತ್ಯ-ಸಾಕ್ಷಾತ್ಕಾರಗಳ ಮಂತ್ರವಾಯಿತು; ಭಾವ-ವಿಚಾರಗಳ ಯಂತ್ರವಾಯಿತು. ಸಾಹಿತ್ಯ ಶಾಸ್ತ್ರಗಳ ತಂತ್ರವಾಯಿತು. ಮಾತು ಹಾಡಿನ ಹೊಳೆಯಾಗಿ ಹರಿಯಿತು; ನಗೆಯೂ ನಲ್ಮೆಯ ನುಡಿಯಾಗಿ ಮೆರೆಯಿತು; ಕತೆಯ ಬಳ್ಳಿಗೆ ಕಲ್ಪನೆಯು ಕುಡಿಯಾಗಿ, ಮಿಡಿಯಾಗಿ, ಕಾಯಾಗಿ, ಹಣ್ಣಾಗಿ, ಜಾನಪದ ಜಗತ್ತಿನ ತುಂಬೆಲ್ಲ ಮಾತು ಹರಡಿತು. **ಮಾತು ಕತೆಯಾಯಿತು, ಕತೆ ಸಾಹಿತ್ಯ-ವಾಯಿತು; ಶಾಸ್ತ್ರಪುರಾಣಗಳಲ್ಲಿ ಸೇರಿಕೊಂಡಿತು.** ಕಾವ್ಯ-ನಾಟಕಗಳಲ್ಲಿ ಪ್ರವೇಶಮಾಡಿತು; ಹರಟೆ-ಹಾಸ್ಯಗಳ ವೇಷ ತಳೆಯಿತು. ಒಡಗತೆಯಾಯಿತು; ಅಡ್ಡಗತೆಯಾಯಿತು; ಸರಳಗತೆಯಾಯಿತು; ಹಿರಿಗತೆಯಾಯಿತು. ಕತೆ ಸಣ್ಣ-ದೊಡ್ಡ-

ಚುಟುಕು-ಚೂರು, ಪನಿ-ಹಳ್ಳ, ಹೊಳೆ-ಸಾಗರ ರೂಪ ತಾಳಿ ಸರ್ವವ್ಯಾಪಿಯಾಯಿತು. ಜಾನಪದ ಕಥಾಸೃಷ್ಟಿ ವಿಶಾಲವಾಗಿ ಬೆಳೆಯಿತು.

## ೨. ಹೇಗೆ ಬೆಳೆಯಿತು ?

ಮಾನವನು ಲಿಪಿಯನ್ನು ಕಲಿತ ನಂತರ ಮಹತ್ವದ ಮಾತುಗಳನ್ನೆಲ್ಲ ಬರೆದಿಡತೊಡಗಿದನು. ಉಳಿದ ಮಾತುಗಳ ಜೊತೆಗೆ ತನಗೆ ಮನೋರಂಜನೆಯನ್ನು ಉಂಟುಮಾಡಿದ, ನೀತಿಯ ಪಾಠವನ್ನು ಕಲಿಸಿದ, ತತ್ವದ ತಿರುಳನ್ನು ತಿಳಿಸಿದ ಕತೆಯ ಮಾತುಗಳನ್ನು ಮರೆಯುವುದು ಅವನಿಗೆ ಸಾಧ್ಯವಾಗ ಲಿಲ್ಲ. ಹೀಗಾಗಿ ಜಾನಪದ ಕಥಾಸಾಹಿತ್ಯವು ಗ್ರಂಥದ ಗದ್ದುಗೆ ಯೇರತೊಡಗಿತು. 'ಬೃಹತ್ಕಥಾಕೋಶ'ವಾಯಿತು; 'ಕಥಾ ಸರಿತ್ಸಾಗರ'ವಾಯಿತು.

ವೇದಗಳಲ್ಲಿ ಕತೆಗಳನ್ನು ಕಾಣುತ್ತೇವೆ. ಉಪನಿಷತ್ತಿನ ಕತೆಗಳು ಸುಪ್ರಸಿದ್ಧವಾಗಿವೆ. "ನಮ್ಮ ಆದಿ ಕಾವ್ಯ ಒಂದು ಕತೆ; ಪಂಚಮ ವೇದವೆನಿಸಿಕೊಂಡಿರುವ ನಮ್ಮ ಮಹಾಕಾವ್ಯ ಒಂದು ಕಥಾಸ್ತೋಮ." —ಶ್ರೀನಿವಾಸ.

ಆದರೆ, ಕೆಲವು ಕತೆಗಳು ಗ್ರಂಥರೂಪ ತಾಳದೆ ಜನಪದ ಜೀವನದಲ್ಲಿ ಬಳಕೆಯ ಮಾತಿನಲ್ಲಿ ಜೀವಂತವಾಗಿ ಉಳಿದು ಬಂದಿವೆ. ಇಂದಿಗೂ ಹಳ್ಳಿಪಳ್ಳಿಗಳಲ್ಲಿ ಇಂಥ ಅದೆಷ್ಟೋ ಕತೆಗಳು ನಮ್ಮ ನಿದರ್ಶನಕ್ಕೆ ಬರುತ್ತವೆ. ಇದೆ ಜನಪದ ಕಥಾ ಸೃಷ್ಟಿ. ಇಂಥ ಕತೆಗಳು ಮತ್ತೆ ಹುಟ್ಟುತ್ತ ಬೆಳೆಯುತ್ತಲೇ ಇರುತ್ತವೆ.

## ೩. ಜನಪದ ಕಥಾ ಸ್ವರೂಪವೆಂಥದು ?

ಕುರುಬರ ಕತೆಗಳು, ದಾಸರ ಕತೆಗಳು, ಗೊಂದಲಿಗರ ಕತೆಗಳು, ಕೀರ್ತನಕಾರರ ದೃಷ್ಟಾಂತ ಕತೆಗಳು, ಪುರಾಣಕಾರರ ಅಡ್ಡಕತೆಗಳು, ಯಕ್ಷಗಾನ–ದೊಡ್ಡಾಟ–ಬಯಲಾಟ ಮೂಡಲಪಾಯ–ಪಾರಿಜಾತಾದಿ ಹಳ್ಳಿಯ ರಂಗಭೂಮಿ ಕತೆ–ಗಳು, ಲಾವಣಿ ಹಾಡಿನ ಕತೆಗಳು–ಮುಂತಾದ ನೂರಾರು ಸಾವಿರಾರು ಕತೆಗಳು ಸುಪ್ರಸಿದ್ಧಿಯನ್ನು ಪಡೆದಿವೆ. ಕಾಗೆ-ಗುಬ್ಬಿ ಕತೆಗಳು, ನರಿ–ನಾಯಿ ಕತೆಗಳು, ಆನೆ–ಒಂಟೆ ಕತೆಗಳು ಮುಂತಾದ ಕಟ್ಟುಕತೆಗಳು; ಮೋಜಿನ ಕತೆಗಳು, ಸೋಜಿಗ ಕತೆಗಳು ಲೆಕ್ಕವಿಲ್ಲದಷ್ಟು ಇವೆ. ತರುಣರಿಗೆ ಸಾಹಸಿಗಳಿಗೆ ಹೇಳುವ ಅದ್ಭುತ ರಮ್ಯಕತೆಗಳು, ಕಳ್ಳರ ಕತೆಗಳು, ಬಂಟರ–ಸಾಹಸಿಗಳ ಕತೆಗಳು; ನಾಡಿನ ಹೆಮ್ಮೆಯ ವೀರರ ಕತೆಗಳೂ ಉಂಟು. ಹುಡುಗರಿಗೆ ಹೆಣ್ಣುಮಕ್ಕಳಿಗೆ ಹೇಳುವ ಒಡಗತೆ, ಸರಗತೆ, ಚುಟುಕು ಕತೆ, ನೀತಿ ಕತೆ, ರಾಜಾರಾಣಿ ಕತೆ, ಮಂತ್ರ–ತಂತ್ರಕತೆ, ಜಾದೂಗಾರ ಕತೆ, ದೆವ್ವರಾಕ್ಷಸಗಳ ಕತೆ, ಅಜ್ಜಿಯ ಕತೆಗಳು ಅಗಣಿತವಾಗಿವೆ.

ಜಾನಪದ ಶಕ್ತಿ ಜೀವನದ ಆಗು–ಹೋಗುಗಳಿಗೆ ಬೇಕಾದ ಒಂದು ವಿಶಿಷ್ಟ ಸಂಸ್ಕೃತಿಯ ಮಟ್ಟವನ್ನು ತಾನೇ ಕಟ್ಟಿಕೊಳ್ಳುವುದು; ತನ್ನ ಅನುಯಾಯಿಗಳ ಅಸ್ತಿತ್ವಕ್ಕೆ ಅವಕಾಶಕೊಡುವ ಬಾಳಿನಲ್ಲಿ ನಂಬಿಗೆ ಉಂಟಾಗುವಂತೆ ಮಾಡುವ ಹತ್ತಾರು ವಸ್ತುಗಳ ಕಡೆಗೆ ತನ್ನ ದೃಷ್ಟಿಯನ್ನು ಹರಿಸುವುದು; ತನ್ನ ಕಾರ್ಯ ನಿರ್ವಹಣೆಯಲ್ಲಿ ತನಗೆ ಉಪಯೋಗ ಬೀಳುವಷ್ಟು ಶಾಸ್ತ್ರ

ಸಮ್ಮತಿ, ತತ್ವದ ಬೆಂಬಲ, ನೀತಿಯ ನೆಲೆ, ಧರ್ಮದ ತಿರುಳು ತನ್ನದನ್ನಾಗಿಸಿಕೊಳ್ಳುವುದು; ಜನತೆಯ ಅನುಭವದ ಆಧಾರವನ್ನೇ ಹೆಚ್ಚಾಗಿ ನಂಬುವುದು. ಕೆಲವು ಮೂಢ ನಂಬಿಕೆಗಳನ್ನು ಇಟ್ಟುಕೊಂಡರೂ ಸತ್ಯಸೃಷ್ಟಿಯ ಅರಿವನ್ನು ಜಾನಪದ ಶಕ್ತಿ ಎಂದೋ ಅರಿತುಕೊಂಡಿದೆ; ಮಾರ್ಗ ಪದ್ಧತಿಯಿಂದ ಭಿನ್ನವಾದ ತನ್ನದೇ ಕುಣಿತ, ಹಾಡು, ಚಿತ್ರ, ಸಾಹಿತ್ಯಗಳ ಸಂಪ್ರದಾಯುವನ್ನೂ ಇಟ್ಟುಕೊಂಡಿದೆ. ಜನಪದ ಸಾಹಿತ್ಯ ಜಾನಪದ ವೇದವಾಗಿ ವಿಶಾಲವಾಗಿದೆ. ಅದರಲ್ಲಿ ಕತೆ ಒಂದು ಭಾಗವಾಗಿ ಇದ್ದರೂ ಮೊತ್ತದಲ್ಲಿ ಸತ್ವದಲ್ಲಿ ಸಣ್ಣದೇನೂ ಅಲ್ಲ.

"ನಮ್ಮ ಜಾನಪದ ಪರಂಪರೆಯಲ್ಲಿ ಕತೆಯ ಸಾಹಿತ್ಯ ರಾಶಿ ರಾಶಿಯಾಗಿ ಸಿಕ್ಕುವುದು. ಅಜ್ಜಿ ಹೇಳುವ ಮಕ್ಕಳ ಕತೆ–ಯನ್ನು ಮೊದಲು ಮಾಡಿ ವೇದಾಂತ ತತ್ವಗಳನ್ನು ಬೋಧಿಸುವ ಪೌರಾಣಿಕ ಕತೆಗಳವರೆಗೆ ಕಥಾಜಾತಿಯ ವಿವಿಧ ಸ್ವರೂಪಗಳು—ಅದರಲ್ಲಿ ನೋಡಲು ದೊರೆಯುವವು. ತ್ಯಾಗವೀರರನ್ನೂ, ಧರ್ಮವೀರರರನ್ನೂ, ಯುದ್ಧವೀರರರನ್ನೂ ಬಣ್ಣಿಸಿದ ಪವಾಡ ಕಥೆಗಳಿರುವವು. ಶೃಂಗಾರ ಸರಸಿಗಳಾದ ರಾಜ-ರಾಣಿಯರ ಸರಸ ರಂಜಕ ಕತೆಗಳು ಇರುವವು. ಕೋಟೆ–ಕೊತ್ತಳ, ಗುಡಿ-ಗೋಪುರ, ಕೆರೆ-ಕೊಳಗಳಿಗೆ ಸಂಬಂಧಿಸಿದ ಕತೆಗಳೂ ಇರುವವು. ವೀರಗಲ್ಲು, ಮಾಸ್ತಿಕಲ್ಲುಗಳನ್ನು ಕುರಿತು ಕತೆಗಳೂ ಇರುವವು. ಇವುಗಳಲ್ಲಿಯ ಹಲವು ಕತೆಗಳು ಅರಳಿಕೆಯಲ್ಲಿ ಅಲ್ಲದೆ ಹೋದರೂ ಮೂಲ ಸ್ವರೂಪದಲ್ಲಿ ಆಧುನಿಕ ಸಣ್ಣ ಕತೆಗಳ ತಂತ್ರಕ್ಕೆ ಹೊಂದುವಂತಹವೇ ಇರುತ್ತವೆ. ಆದರೆ

ಈ ಕತೆಗಳನ್ನು ನಿರ್ಮಿಸಿದ ಅಜ್ಞಾತ ವ್ಯಕ್ತಿಗಳಿಗೆ ಇಲ್ಲವೆ ಪರಿಸ್ಥಿತಿಗೆ ಸಣ್ಣ ಕತೆಯ ಸಾಹಿತ್ಯ ತಂತ್ರದ ಪ್ರಜ್ಞೆಯೇನೂ ಇರಲಿಲ್ಲ. ಇಂದಿನವರು ಆ ಕಥಾವಸ್ತುವನ್ನು ತೆಗೆದುಕೊಂಡು ಸುಲಭವಾಗಿ ಸುಂದರವಾದ ಸಣ್ಣ ಕತೆಗಳನ್ನು ಅರಳಿಸಿ ತೋರಿಸಬಹುದು."—ಬೆಟಗೇರಿ ಕೃಷ್ಣಶರ್ಮ.

## ೪. ಜನಪದ ಕಥಾಪ್ರಯೋಜನ

ಬಿಡುವಿನ ವೇಳೆಯಲ್ಲಿ ಮನೋರಂಜನೆಯನ್ನು ಉಂಟು ಮಾಡಿಕೊಳ್ಳುವುದು, ಪ್ರಪಂಚ ಜ್ಞಾನವನ್ನು ವಿಸ್ತರಿಸಿಕೊಳ್ಳು-ವುದು, ನೀತಿ–ತತ್ವ ಧರ್ಮ–ದರ್ಶನಗಳಲ್ಲಿ ಜಿಜ್ಞಾಸೆಯನ್ನು ತೋರಿಸುವುದು ಮುಂತಾದ ಕಾರಣಗಳಿಂದ ಜನಪದ ಕಥಾ ಸೃಷ್ಟಿ ಹಿಗ್ಗಲಿಸಿತು. ಪ್ರಾಚೀನ ಕಾಲದಿಂದಲೂ ಕತೆಗಳು ತುಂಬ ಜನಪ್ರಿಯವಾಗಲು ಜಟಿಲವಲ್ಲದ, ಸುಪ್ರಸನ್ನ, ನಿರಾ-ಭರಣ ಸುಂದರ, ಹೃದಯಸ್ಪರ್ಶಿಯಾದ ರೀತಿ–ತಂತ್ರಗಳೆ ಕಾರಣವಾದವು. ಕತೆಗಳಲ್ಲಿ ಜನಮನವನ್ನು ಹಿಡಿದಿಡುವ ಅಂಥ ಯಾವುದೋ ಒಂದು ವಿಶೇಷ ಮಾಯೆ ಇದೆ. ಆಕರ್ಷಕ ಶಕ್ತಿ ಇದೆ. ಬುದ್ಧಿಯನ್ನು ತರ್ಕದ ಜಾಳಿಗೆಯಲ್ಲಿ ಹಿಡಿದು ಬಂಧಿಸುವ ಯುಕ್ತಿ ಇದೆ.

"ಕಥೆ ಹೇಳುವುದು ಮತ್ತು ಕೇಳುವುದು ಮಾನವ ಜನಾಂಗದ ಹುಟ್ಟು ಗುಣ. ಬಾಲವೃದ್ಧರೆನ್ನದೆ, ಪಂಡಿತ–ಪಾಮರರೆನ್ನದೆ, ಸರ್ವರುಚಿ ಸರ್ವಸಂಸ್ಕಾರಗಳ ಜನರು ಕಥಾ ಶ್ರವಣದಿಂದ ಮನಸ್ತೃಪ್ತಿಯನ್ನೂ, ಹೃದಯ ತುಷ್ಟಿಯನ್ನೂ,

ಬುದ್ಧಿ ಪುಷ್ಟಿಯನ್ನೂ ಪಡೆಯುತ್ತಾರೆ. ಹೊಲ-ಗದ್ದೆಗಳಲ್ಲಿ ಕೆಲಸ ಮಾಡುವಾಗ ಕತೆ ಹೇಳುತ್ತಿದ್ದರೆ ಕೆಲಸ ಚನ್ನಾಗಿ ಸಾಗುತ್ತದಲ್ಲದೆ, ಕೆಲಸದ ಕ್ಲೇಶ ಅಗೋಚರವಾಗುತ್ತದೆ. ಕತೆ ಕೇಳುತ್ತಿದ್ದರೆ ಮಾರ್ಗಾಯಾಸದ ಅರಿವು ಆಗುವದಿಲ್ಲ. ಕತೆ ಮೊದಲುಮಾಡಿದರೆ ಮಗುವಿನ ಅಳುವು ನಿಲ್ಲುತ್ತದಲ್ಲದೆ ಸುಲಭವಾಗಿ ನಿದ್ದೆ ಮಾಡುತ್ತದೆ. ಆಹ್ಲಾದವೇ ಕತೆಯ ಕೇವಲ ಪ್ರಯೋಜನವಲ್ಲ. ಆತ್ಮೋದ್ಧಾರ, ಆತ್ಮಸಂಸ್ಕಾರ, ಆತ್ಮವಿಕಾಸ ಇವೂ ಕತೆಯ ಗುರಿ."—ದೇ. ಜವರೇ ಗೌಡ.

ಯಾವ ನೀತಿಬೋಧೆಯಿಂದಲೂ, ಧರ್ಮಾಚರಣೆ-ಯಿಂದಲೂ, ಕಾಯ್ದೆ ಕಾನೂನುಗಳಿಂದಲೂ, ಸುಲಭಸಾಧ್ಯ-ವಲ್ಲದ ಮಾನವನ ಮನಸ್ಸು ತಿದ್ದುವ ಕಾರ್ಯ ಕತೆ ಮೊದ-ಲಾದ ಲಲಿತ ಸಾಹಿತ್ಯದಿಂದ ಅತಿ ಸುಲಭಸಾಧ್ಯವಾಗಿದೆ. ಅಲ್ಲದೆ ಅದು ಕಡಿಮೆ ಶ್ರಮದಲ್ಲಿ ಹೆಚ್ಚು ಪ್ರಯೋಜನ ಉಳ್ಳದು. ಈ ಮಹತ್ವದ ಅಂಶವನ್ನು ಜಾನಪದಶಕ್ತಿ ತಿಳಿದುಕೊಂಡಿದೆ. ಅಂತೆಯೆ ಅದು ಜನತೆಯ ನಿತ್ಯಜೀವನದಲ್ಲಿ ಕತೆಗಳಿಗೆ ಸಾಕಷ್ಟು ಅವಕಾಶ ಕಲ್ಪಿಸಿದೆ.

## ೫. ಜನಪದ ಕಥಾಮಾದರಿಗಳು :

### ೧. ಅಜ್ಜಿಯ ಕತೆಗಳು

ಸಂಜೆ ಮೊಮ್ಮಕ್ಕಳನ್ನು ಕರೆದುಕೊಂಡು ಅಜ್ಜಿ ಮನೆಯ ಕಟ್ಟೆಯ ಮೇಲೆ ಕುಳಿತು ಕತೆ ಹೇಳಲು ತೊಡಗುತ್ತಾಳೆ. ಇಂಥ ಅದೆಷ್ಟೋ ಕತೆಗಳನ್ನು ಅಜ್ಜಿಯಂದಿರು ಹಳ್ಳಿ-ಪಳ್ಳಿಗಳಲ್ಲಿ

ನಿತ್ಯವೂ ಹೇಳುತ್ತಲೇ ಇರುತ್ತಾರೆ. ಇವೆಲ್ಲವುಗಳನ್ನು ಸಂಗ್ರ-ಹಿಸಿದರೆ ಅದೊಂದು ಗ್ರಂಥರಾಶಿಯೇ ಆಗುವುದು. ಮಕ್ಕಳ ಸಾಹಿತ್ಯ ಪರಿಪುಷ್ಟವಾಗಿ ಬೆಳೆಯುವುದು. ಮಕ್ಕಳ ಮನೋ-ವಿಜ್ಞಾನವನ್ನು ಅಜ್ಜಿ ಚೆನ್ನಾಗಿ ಬಲ್ಲಳು. ವಾಸ್ತವ ಅಂಶಗಳಿಗೆ ಪ್ರಾಧಾನ್ಯಕೊಡದೆ ಚಿಕ್ಕಮಕ್ಕಳ ಮನಸ್ಸನ್ನು ಆಕರ್ಷಿಸುವ ಕಲ್ಪಕತೆಗೆ ಹೆಚ್ಚು ಗಮನಕೊಡಬೇಕೆಂಬ ಅಂಶವನ್ನು ಅಜ್ಜಿ ಚನ್ನಾಗಿ ತಿಳಿದಿದ್ದಾಳೆ. ಮಕ್ಕಳ ಕತೆಗಳು ಭಾವಪೂರ್ಣ-ವಾಗಿರಬೇಕು. ಹಾಸ್ಯರಸದಿಂದ ತುಂಬಿರಬೇಕು. ಅದ್ಭುತ ರಮ್ಯವಾಗಿರಬೇಕು. ಕತೆಯ ಯಾವ ಅಂಶವೂ ಅಪೂರ್ಣ ವಾಗಿರಕೂಡದು, ಹಾಗಿದ್ದರೆ ಮಕ್ಕಳು ಸಹಿಸುವದಿಲ್ಲ. ಪ್ರತಿಯೊಂದು ಘಟನೆಗೂ ಕಾರಣವಿರಬೇಕು. ಈ ಎಲ್ಲ ಲಕ್ಷಣಗಳನ್ನು ಅರಿತುಕೊಂಡೇ ಅಜ್ಜಿ ಕತೆ ಹೇಳುತ್ತಾಳೆ. ಕತೆಗಾಗಿ ಮಕ್ಕಳು ಅಜ್ಜಿಯನ್ನು ಅತಿಯಾಗಿ ಪೀಡಿಸಿದರೆ 'ಕತಿ ಕತಿ ಕಾರಣಾ ಕಾರಣಾ, ಮುದುಕಿಯ ಹೂರಣಾ ಹೂರಣಾ, ತಿಂದ್ಯೋ ಚಲ್ಲಿದೆಯೊ ?' ಎಂದು ಪ್ರಾರಂಭಿಸಿ ಕೊನೆಗೆ 'ಅಜ್ಜಿ ಏನು ಕೊಟ್ಟಳು ? ಮೂರು ಗಜ್ಜುಕೊಟ್ಟಳು' ಎಂದು ಹೇಳಿ ಅವರ ಬೆನ್ನು ಬಾರಿಸುತ್ತಾಳೆ—ಮೆಲ್ಲಗೆ !

## ೨. ಗೊಂದಲಿಗರ ಕತೆಗಳು

ಸುಗ್ಗಿ ಮುಗಿದ ನಂತರ ದೇವರ ಗುಡಿಯಲ್ಲಿ ಇಲ್ಲವೆ ಅಂಗಳದ ಬಯಲಲ್ಲಿ ರಾತ್ರಿ—ಬಹುಶಃ ಬೆಳದಿಂಗಳ ರಾತ್ರಿ—ಹಳ್ಳಿಗರು ಗೊಂದಲಿಗರಿಂದ ಕತೆ ಹೇಳಿಸುತ್ತಾರೆ. ಇವರು ಕತೆ ಹೇಳುವುದನ್ನೇ ತಮ್ಮ ವೃತ್ತಿಮಾಡಿಕೊಂಡಿರುತ್ತಾರೆ.

ಉತ್ತರ ಕರ್ನಾಟಕದಲ್ಲಿ ಇಂದಿಗೂ ಈ ವೃತ್ತಿಯಿಂದಲೇ ಜೀವಿಸುವ ಕೆಲವು ಗೊಂದಲಿಗರ ಮನೆತನಗಳಿವೆ. ಮದುವೆ–ಮುಂಜಿಗಳ ಕಾಲಕ್ಕೆ, ಹಬ್ಬಗಳಲ್ಲಿ ತಮ್ಮ ಮನೆಯ ಮುಂದೆ ಗೊಂದಲ ಹಾಕಿಸುವದನ್ನು (ಗೊಂದಲಿಗರಿಂದ ಕತೆ ಹೇಳಿಸು–ವದನ್ನು) ಸಂಪ್ರದಾಯವಾಗಿ ಇಟ್ಟುಕೊಂಡ ಕೆಲವು ಶ್ರೇಷ್ಠ ಶ್ರೀಮಂತ ಮನೆತನಗಳೂ ಉಂಟು. ತಾಳ, ತಬ್ಬಲದೊಂದಿಗೆ, ಹಿಮ್ಮೇಳದೊಡನೆ, ಹಾಡುತ್ತ, ಬಾರಿಸುತ್ತ, ವರ್ಣನೆ ಮಾಡುತ್ತ ಒಂದು ವಿಶಿಷ್ಟ ಧ್ವನಿ ತೆಗೆದು ಅವರು ಹೇಳುವ ಕತೆಗಳು ಬಲು ಚಿತ್ತಾಕರ್ಷಕವಾಗಿರುತ್ತವೆ. 'ಶಾರ ಸೋದ್ಯಾ ಊರಸೋದ್ಯಾ' 'ಏಳುಮಲ್ಲಿಗೆ ಹೂವಿನ ತೂಕದ ರಾಣಿ' 'ಶೂರಸೇನ ರಾಜಾ' ಮುಂತಾದ ಕಾಲ್ಪನಿಕ ಕಟ್ಟು ಕತೆಗಳನ್ನು ಜನಸಾಮಾನ್ಯರ ಮನ ಮುಟ್ಟುವಂತೆ ಎರಡು ಮೂರು ತಾಸುಗಳವರೆಗೆ ಕತೆ ಹೇಳುವುದ ರಲ್ಲಿ ಗೊಂದಲಿಗರು ಬಲುಗಟ್ಟಿಗರು. ನಡುನಡುವೆ ಹಾಸ್ಯದ ಚಟಾಕಿಗಳನ್ನು ಹಾರಿಸುತ್ತ ಹಾಡುತ್ತಾರೆ. ಉಪಕತೆ, ಒಡಗತೆ, ಅಡ್ಡಗತೆ, ಸರಗತೆಗಳನ್ನು ಜೊತೆಗೆ ಸೇರಿಸಿಕೊಳ್ಳು–ತ್ತಾರೆ. ರಸ ಪ್ರಸಂಗಗಳಲ್ಲಿ ವರ್ಣನೆ ವಿವರಣೆ ವ್ಯಾಖ್ಯಾನ ಸಂವಾದಗಳನ್ನು ಸೇರಿಸಿ ಕತೆ ರಮ್ಯವಾಗುವಂತೆ ಮಾಡುತ್ತಾರೆ. ಮನೋರಂಜನೆಯೇ ಇಂಥ ಕತೆಗಳ ಗುರಿಯಾದರೂ ನೀತಿಯ ಪಾಠ ವ್ಯವಹಾರಜ್ಞಾನ ಅಲ್ಪಸ್ವಲ್ಪ ದೊರೆಯುತ್ತದೆ.

### ೩. ಪುರಾಣ–ಕೀರ್ತನಕಾರರ ಕತೆಗಳು

ಶ್ರಾವಣ ಮಾಸದಲ್ಲಿ, ಚಾತುರ್ಮಾಸದಲ್ಲಿ ಗುಡಿ, ಮಠ, ಬಸದಿಗಳಲ್ಲಿ ಪುರಾಣ ಹಚ್ಚುತ್ತಾರೆ. ಪುರಾಣಿಕರು

ರಾಮಾಯಣ, ಮಹಾಭಾರತ, ನಳಚರಿತ್ರೆ, ಬಸವ ಪುರಾಣ, ತೀರ್ಥಂಕರರ ಪುರಾಣ, ಸಾಧುಸಂತರ–ಶರಣರ ಚರಿತ್ರೆ, ದೇವಿ ಪುರಾಣಗಳನ್ನು ಹೇಳುತ್ತ ತಾತ್ವಿಕ ಚರ್ಚೆ ಮಾಡುತ್ತ ದೃಷ್ಟಾಂತಗಳನ್ನು ಕೊಡುತ್ತ ಕೆಲವು ಅಡ್ಡಗತೆ, ಚಿಕ್ಕಕತೆ, ಪ್ರಸಂಗಗಳನ್ನು ಹೇಳುತ್ತಾರೆ. ಬಹುಶಃ ಇಂಥ ಕತೆಗಳೆಲ್ಲ ಜನಪದ ಕಥಾಸೃಷ್ಟಿಯಿಂದಲೇ ಎರವಲಾಗಿ ತೆಗೆದುಕೊಂಡವು. ಪುರಾಣಗಳಲ್ಲಿ ಅಭಿರುಚಿ ಹುಟ್ಟಿಸಲು ಈ ತರದ ಹೊಂಚು ಹಾಕುತ್ತಾರೆ. ಕೀರ್ತನಕಾರರು ಪುರಾಣಿಕರಿಗಿಂತ ಹಳ್ಳಿಗರಿಗೆ–ಬಲು ಮೆಚ್ಚುಗೆ ಉಳ್ಳವರು. ಸುಧಾರಿಸಿದ ಗೊಂದಲಿಗರೇ ಕೀರ್ತನಕಾರರೆನ್ನಬಹುದು. ಗೊಂದಲಿಗರ ಕತೆ ಕಟ್ಟುಕತೆ ಯಾದರೆ ಕೀರ್ತನಕಾರರ ಕತೆ ಶಾಸ್ತ್ರೋಕ್ತವಾದುದು; ಸುಪ್ರಸಿದ್ಧವಾದುದು. ಆದ್ದರಿಂದಲೇ ಕೀರ್ತನಕಾರರು ಪಾಮರರ ಮತ್ತು ಪಂಡಿತರ ಮನಸ್ಸನ್ನೂ ಸೂರೆಗೊಳ್ಳಲು ಶಕ್ತರು. ಧರ್ಮ ಶ್ರವಣದ ಜೊತೆಗೆ ಮನೋರಂಜನೆಯೂ ಇವರ ಕತೆಗಳಲ್ಲಿ ದೊರೆಯುತ್ತದೆ. ಹಾಸ್ಯದ ರಸನಿಮಿಷಗಳು, ಸಂಗೀತದ ಶ್ರವಣಾನಂದ ಮುಂತಾದವು ಇನ್ನೂ ಕೀರ್ತನಕಾರರ ಮಹತ್ವವನ್ನು ಹೆಚ್ಚಿಸುತ್ತವೆ.

**೪. ಕುರುಬರ ಕತೆಗಳು :**

ಮಸೆವ್ವ, ಮಾಳವ್ವ, ಕರೆವ್ವ ಮುಂತಾದ ದೇವಿಯ ಗುಡಿಗಳಲ್ಲಿ ಆಗಾಗ ಇಡೀ ರಾತ್ರಿ ಡೊಳ್ಳು ಬಾರಿಸುತ್ತ ಕತೆ ಹೇಳುವ ಸಂಪ್ರದಾಯ ಕುರುಬರ ಜನಾಂಗದಲ್ಲಿ ರೂಢಿಯಲ್ಲಿದೆ. ಕರಿಸಿದ್ಧ, ಮುರಸಿದ್ಧ, ಅರ್ಣ್ಯಾಣಸಿದ್ಧ, ಬೀರಪ್ಪ ದೇವರ ಗುಡಿಗಳಲ್ಲಿ

ನವರಾತ್ರಿಯ ಸಮಯಕ್ಕೆ ನಿತ್ಯವೂ ಇಂಥ ಕತೆಗಳು ನಡೆಯು-ತ್ತವೆ. ಮದುವೆಯ ಸಮಯದಲ್ಲಿಯೂ, ಹಬ್ಬಗಳಲ್ಲಿಯೂ ಕಥೆಗಳು ಹಾಡುಗಳ ರೂಪದಿಂದಲೂ ಹೊರಹೊಮ್ಮುತ್ತವೆ. ಗದ್ಯಗಂಧೀ ಪದ್ಯದಲ್ಲಿ ಹೇಳುವ ಈ ಕತೆಗಳು ಡೊಳ್ಳಿನ ಗಂಭೀರ ಧ್ವನಿಯೊಂದಿಗೆ ಬಲು ಮಧುರವಾಗಿ ಕೇಳಿಸುತ್ತವೆ. ಕತೆಗಳಲ್ಲಿ ಕೃತ್ರಿಮತೆ ಇಲ್ಲ. ಸಹಜ ಸರಳ ಶೈಲಿಯಲ್ಲಿ ಸಾಮಾನ್ಯ ಜೀವನಕ್ಕೆ ತೀರ ಹತ್ತಿರದ ವಿಷಯವನ್ನೇ ಒಳಗೊಂಡು ಮನೋ ರಂಜನೆಯೊಡನೆ ಭಕ್ತಿಯನ್ನು ಬೆರೆಸಿ ಹೇಳುವ ಇಂಥ ಕತೆಗಳಿಂದ ಜೀವನದಲ್ಲಿ ನಂಬಿಗೆ ಬೆಳೆಯುತ್ತದೆ.

**೫ ದಾಸರ–ಲಾವಣಿಕಾರರ ಕತೆಗಳು:**

ದಾಸರೂ ಕತೆ ಹೇಳಿ ಹೊಟ್ಟೆ ತುಂಬಿಕೊಳ್ಳುವ, ಇಲ್ಲವೆ ಹಾಡನ್ನು ಹೇಳಿ ಭಿಕ್ಷೆ ಬೇಡುವ ಒಂದು ದಲಿತ ವರ್ಗಕ್ಕೆ ಸೇರಿದ ವರು. ಹರಿದಾಸರಲ್ಲ; ಇವರು ದೊಂಬೆದಾಸರು; ಹಿಂದುಳಿದ ಒಂದು ವರ್ಗಕ್ಕೆ ಸೇರಿದವರು. ದಮ್ಮಡಿ ಬಾರಿಸುತ್ತ, ಏಕ ತಾರಿ ಮಿಡಿಯುತ್ತ ಅಭಿಮನ್ಯುವಿನ ಕತೆ, ರಾಮ-ಲಕ್ಷ್ಮಣರ ಕತೆ, ಪಾಂಡವರ ಕತೆ ಹೇಳುವುದರ ಜೊತೆಗೆ ಬಂಟರ ಕತೆಗಳನ್ನೂ ಹೇಳುತ್ತಾರೆ. ಸಾಧುಸಂತರ ಕತೆಗಳನ್ನೂ ಹೇಳುತ್ತಾರೆ. "ಕಾಗಿನ ಒಗದವಗ ಸೀತಾನ ಕೊಡತ್ನೆತಿ ಗೆದ್ದ ಒಯ್ಯಿರಿ ಪಂಡಿ ತರಾ, ಜೋರಾದವರಾಽಽ" ಎಂದು ರಾಮಾಯಣ ಹೇಳುವು ದರ ಜೊತೆಗೆ ಸಂಗೊಳ್ಳಿರಾಯಣ್ಣ, ಸಿಂಧೂರ ಲಕ್ಷ್ಮಣ, ಕಟ್ಟೀ ಚೆನ್ನ, ಪವುಣಂಚಯ, ಮುಂತಾದ ಕನ್ನಡನಾಡಿನ ಸಾಮಾನ್ಯ ಜನತೆಯ ಮುಂದೆ ಅಸಾಮಾನ್ಯ ಸಾಹಸಮಾಡಿ ಮೆರೆದ ಬಂಟರ

ಹಾಡುಗಳನ್ನು ಹೇಳುತ್ತಾರೆ. ಕಿತ್ತೂರ ಚೆನ್ನಮ್ಮ, ಮುಂಡರಗಿ ಭೀಮರಾಯ, ನರಗುಂದ ಬಾಬಾಸಾಹೇಬ, ಹಲಗಲಿ ಜಡಗಾಬಾಲಾರ ಕಥೆಗಳನ್ನೂ ಸುಂದರವಾಗಿ, ವೀರರಸ ಉಕ್ಕುವಂತೆ, ಮೈ ರೋಮಾಂಚನಗೊಳ್ಳುವಂತೆ, ಹಾಡಿ ತೋರಿಸುತ್ತಾರೆ. ಇಂಥ ಹಾಡುಗಳು, ಆ ಹಾಡಿನಲ್ಲಿ ಬರುವ ಕತೆಗಳು ನಿಜವಾಗಿ ನಮ್ಮ ನಾಡಿನ ಹೆಮ್ಮೆಯ ಸೊತ್ತುಗಳು ಇವುಗಳನ್ನು ಎಷ್ಟು ಸಲ ಹೇಳಿಸಿದರೂ ಕಡಿಮೆಯೇ. ಲಾವಣಿಕಾರರೂ ಇವುಗಳನ್ನು ಹಾಡುತ್ತಾರೆ, ಜೋಗಿತಿಯರೂ ಹಾಡುತ್ತಾರೆ. ಡಪ್ಪಿನ ಮೇಲೆ ಹರದೇಸಿ-ನಾಗೇಶಿ, ಕಲಿಗಿ-ತುರಾಯಿ, "ಗಂಡು-ಹೆಣ್ಣು" ಹಾಡುವ ಶಾಹೀರರೂ ಇವುಗಳನ್ನು ಹಾಡುತ್ತಾರೆ.

**೬. ಜನಪದ ಜಾಣರ ಕತೆಗಳು :**

ಅಕಬರ ಬೀರಬಲ್ಲರ ಕತೆಗಳು, ತೆನ್ನಾಲಿ ರಾಮಕೃಷ್ಣನ ಕತೆಗಳು ಪ್ರತಿಯೊಬ್ಬರ ನಾಲಗೆಯ ಮೇಲೆ ನಲಿದಾಡುತ್ತಿವೆ. ಬತ್ತೀಸ ಪುತ್ತಳಿಯ ಕತೆಗಳು, ಅರಬ್ಬಿರಾತ್ರಿಯ ಕತೆಗಳು, ಹಾತಿಮತಾಯಿಯ ಕತೆಗಳು, ಯಸೋಪನ ನೀತಿಕತೆಗಳು ಜನಪದ ಕಥಾಸೃಷ್ಟಿಗೆ ಹೊಸ ಮೆರುಗನ್ನೂ, ವಸ್ತುವನ್ನೂ, ವಾತಾವರಣವನ್ನೂ ಒದಗಿಸಿವೆ. ಬೇರೆ ಭಾಷೆಯ ಭಾಷಾಂತರ ಕತೆಗಳಿಂದ ಸಾಹಿತ್ಯ ಸೃಷ್ಟಿ ಹಿಗ್ಗುತ್ತದೆ. ಹೊಸ ಕಲ್ಪನೆಗಳಿಗೆ ಪ್ರಚೋದನೆ ದೊರೆಯುತ್ತದೆ. ಜನಪದ ಕತೆಗಳಿಗೂ ಈ ಮಾತು ಅನ್ವಯಿಸುತ್ತದೆ.

**೬. ಜನಪದ ಕಥಾಸೃಷ್ಟಿಯ ಇಂದಿನ ಸ್ಥಿತಿ–ಗತಿ :**

ಏನೇ ಇರಲಿ, "ಲೋಕೋ ಭಿನ್ನ ರುಚಿಃ" ಎಂಬಂತೆ

ಬೇರೆ ಬೇರೆಯುವರು ತಮ್ಮ ತಮ್ಮ ಅಭಿರುಚಿಯನ್ನು ವ್ಯಕ್ತ ಪಡಿಸುವರು. ಬಹುಸಂಖ್ಯ ಕನ್ನಡಿಗರು ಇಂದಿಗೂ ಅನಕ್ಷರಸ್ಥರು, ಹಳ್ಳಿಗಾಡಿನಲ್ಲಿಯೇ ವಾಸಿಸುವಂಥವರು. ಅವರ ಅಭಿರುಚಿಗೆ ತಕ್ಕ ಜನಪದ ಕಥಾಸೃಷ್ಟಿ ಬಲು ಹಿಂದಿನ ಕಾಲದಿಂದಲೇ ಬಳಕೆಯಲ್ಲಿ ಬಂದು, ದಿನಗಳೆದಂತೆ ಅದಕ್ಕೆ ಹೊಸ ಶಕ್ತಿ ಹೊಂದಿಕೊಳ್ಳುತ್ತ ಇಂದಿನವರೆಗೆ ಜೀವಂತವಾಗಿದೆ. ಆದರೆ ಕಲಿತವರ ಮೂಗುಮುರಿಯುವ ಪ್ರವೃತ್ತಿಯಿಂದ ಅದು ಶಕ್ತಿ ಹೀನವಾಗುತ್ತ ನಡೆದಿರುವ ಲಕ್ಷಣಗಳೂ ಕಂಡುಬರುತ್ತಿವೆ. ನಾಡಜನತೆಯ ಉಸಿರಿನಂತಿರುವ ಈ ಜನಪದ ಕಥಾಸೃಷ್ಟಿ ನಷ್ಟವಾದರೆ ನಾಡಿಗೆ ಏಳಿಗೆ ಎಲ್ಲಿಯದು ? ಲಾವಣಿಕಾರರು, ಶಾಹೀರರು, ಕೀರ್ತನಕಾರರು, ಪುರಾಣಿಕರು, ಗೊಂದಲಿಗರು, ದಾಸರು, ಜೋಗಿತಿಯರು ತಮ್ಮ ಈ ಕತೆ ನಡೆಸುವ ಕಾಯಕವನ್ನು ಇತ್ತೀಚೆಗೆ ಬಿಟ್ಟುಕೊಡುತ್ತಿದ್ದಾರೆ. ಪ್ರೋತ್ಸಾಹವಿಲ್ಲದಿದ್ದರೆ ಅವರೇನು ಮಾಡಬೇಕು ? ಕಲಿತವರು, ತಿಳಿದವರು, ಶಿಕ್ಷಣ ಸಂಸ್ಥೆಗಳು, ವಿಶ್ವವಿದ್ಯಾನಿಲಯಗಳು ಮತ್ತು ಸರಕಾರವು ಅಸಂಖ್ಯ ಜಾನಪದ ಬಾಂಧವರ ಹಿತದ ದೃಷ್ಟಿಯಿಂದ ಮತ್ತು ನಾಡಿನ ಏಳ್ಗೆಯ ಸದುದ್ದೇಶದಿಂದ ಜನಪದ ಸಾಹಿತ್ಯವನ್ನು ಪ್ರೋತ್ಸಾಹಿಸಬೇಕು, ಜನಪದ ಹಾಡುಗಳಂತೆ ಕತೆಗಳನ್ನೂ ಸಂಗ್ರಹಿಸಿ ಪ್ರಕಟಿಸಬೇಕು. ಅವು ಜನತೆಯ ನಿತ್ಯಜೀವನದಲ್ಲಿ ಉಪಯೋಗವಾಗುವ ಹಾಗೆ ನಿರಂತರ ಯೋಜನೆಗಳನ್ನು ಹಾಕಿಕೊಳ್ಳಬೇಕು. ಇದರಿಂದ ನಾಡಿನ ಉದ್ಧಾರವಿದೆ. ಜನತೆಯ ಕಲ್ಯಾಣವಿದೆ.

# ಮಾರ್ಗ ಕಥಾಸೃಷ್ಟಿ

## ೧. ಹೇಗೆ ಹುಟ್ಟಿತು ?

ಮಾತನ್ನು ಬರೆದು ಇಡುವ ಪ್ರಯತ್ನದಲ್ಲಿ ಜನಪದ ಕತೆಗಳೂ ಬರವಣಿಗೆಯನ್ನು ಕಂಡವು. ಅಲ್ಪ ಸ್ವಲ್ಪ ವ್ಯತ್ಯಾಸ ದೊಡನೆ ಸಾಹಿತ್ಯರೂಪ ತಾಳಿದವು. ದಿನಗಳೆದಂತೆ ರೂಪ ಬದಲಾಯಿಸಿದವು. ಹೊಸ ಹೊಸ ಕೈಗಳಿಂದ ಹೊಸ ರೂಪ-ವನ್ನೇ ಹೊಂದಿದವು. ಜನಪದ ಕತೆಗಾರನಿಗಿಂತ ಸಾಹಿತ್ಯ ಕತೆಗಾರ ಬರವಣಿಗೆಯ ನೆರವಿನಿಂದ ಬಹಳಷ್ಟು ಮಾರ್ಗವನ್ನು ನಡೆದು ಬಂದ. ತೀರ ಸ್ವಂತ ಹಾದಿಯೊಂದನ್ನು ಹುಡುಕಿಕೊಂಡ. ಆ ಹಾದಿಯಲ್ಲಿ ನಡೆದೂ ನಡೆದೂ ಕತೆಯನ್ನು ಒಂದು ಶ್ರೇಷ್ಠ ಕಲೆಯಾಗಿ ಮಾರ್ಪಡಿಸಿಕೊಂಡ. ಅದರ ಪರಿಣಾಮವಾಗಿ ಒಂದು ಸುಸಜ್ಜಿತ ಸಾಹಿತ್ಯಮಾರ್ಗ ಸಿದ್ಧ-ವಾಯಿತು. ಜನಪದ ಕಥಾಸೃಷ್ಟಿಗಿಂತ ಅತಿ ವಿಶಾಲವಾಗಿ ಮಾರ್ಗಕಥಾಸೃಷ್ಟಿ ನಿರ್ಮಾಣವಾಯಿತು.

## ೨. ಹೇಗೆ ಬೆಳೆಯಿತು ?

ಸಾಹಿತ್ಯ (ಮಾರ್ಗ) ದಲ್ಲಿ ಬೆಳೆದು ಬಂದ ಕತೆಗಳನ್ನು ಎರಡು ಭಾಗಮಾಡಿ ವಿಂಗಡಿಸಬಹುದು : (i) **ಕತೆ ಹೇಳುವ ಪದ್ಧತಿ**; (ii) **ಕತೆ ಕಟ್ಟುವ ಪದ್ಧತಿ.**

### (i) ಕತೆ ಹೇಳುವ ಪದ್ಧತಿ :

'ಕತೆ, ಎನ್ನುವುದು ಬರಹದಲ್ಲಿ ಬಂದಾಗಲೂ ಸಾಮಾನ್ಯವಾಗಿ ಕಥನ ಪದ್ಧತಿಯನ್ನು ಅನುಸರಿಸಿದ್ದರೆ ಓದು-ವವರ ಮನಸ್ಸನ್ನು ಹಿಡಿಯುತ್ತದೆ. ಹೇಳುವಾಗಣ ಪದ್ಧತಿಯನ್ನು ಹಾಗೆಹಾಗೆಯೇ ಬರಹದಲ್ಲಿ ತರುವುದು ಸಾಧ್ಯವಿಲ್ಲ. ಅಲ್ಲಿ ಹೇಳುವವನ ಧ್ವನಿ ಇದೆ; ಚರ್ಯೆ ಇದೆ; ಮುಖಮುದ್ರೆ ಇದೆ. ಮಧ್ಯೆ ಕೇಳುವವರ ಪ್ರಶ್ನೆ ಇದೆ; ಆಶ್ಚರ್ಯವಿದೆ; ಹೂಂಗುಟ್ಟುವಿಕೆ ಇದೆ. ಬರಹದ ಕತೆ ಜೀವದ ಈ ಹೊಳಪುಗಳಿಲ್ಲದೆ ತನ್ನ ಕೆಲಸವನ್ನು ಸಾಧಿಸಬೇಕು. ಅದಕ್ಕಾಗಿ ಅದು ಅಲ್ಲಲ್ಲಿ ಎರಡು ಮಾತುಗಳನ್ನು ಹೆಚ್ಚಾಗಿ ಹಾಕಬೇಕಾಗುತ್ತದೆ. ಆದರೆ ಮಾರ್ಪಾಡು ಎನ್ನುವುದು ಸಹಜವಾದ ಕಥನ ಪದ್ಧತಿಯನ್ನು ಒಟ್ಟಿನಲ್ಲಿ ಗೌರವಿಸುತ್ತದೆ. ಇದು ಒಂದು ಪದ್ಧತಿ. ಇದನ್ನು **ಕತೆ ಹೇಳುವ ಪದ್ಧತಿ** ಎನ್ನಬಹುದು.'—ಶ್ರೀನಿವಾಸ

### (ii) ಕತೆ ಕಟ್ಟುವ ಪದ್ಧತಿ :

'ಹೇಳುವ ವಿವರ ಮಾರ್ಪಟ್ಟಂತೆ ಕತೆಯ ಭಾಷೆಯೂ ಮಾರ್ಪಡುತ್ತದೆ. ಜೊತೆಗೆ ಕಥೆಯ ಪದ್ಧತಿಯೂ ಮಾರ್ಪ-ಡುತ್ತದೆ. ಕತೆಯ ಈ ರೂಪು ಸಾಹಿತ್ಯ ಎನ್ನುವುದು ಬರಹವಾದುದರಿಂದ ಬಂದ ಫಲ. ಹೊಸ ಕಾವ್ಯ ಹೇಗೆ ಬರಹದ ಕಾವ್ಯವಾಗಿದೆಯೋ ಹಾಗೇ ಹೊಸ ಕತೆಯೂ ಬರಹದ ಕತೆಯಾಗಿದೆ. ಆದರೆ ಇದರಲ್ಲಿಯೂ ಕಥನದಲ್ಲಿ ಕೌಶಲವಿರಬೇಕು.' 'ಕತೆಗಾರನು ತಾನು ತೆಗೆದುಕೊಂಡ ವಿಷಯವನ್ನು ನಾದು-

ತ್ತಾನೆ, ತಿದ್ದುತ್ತಾನೆ, ಒದಗಿಸುತ್ತಾನೆ. ಇದು ಕತೆಯಲ್ಲಿ ಎರಡ-ನೆಯ ರೀತಿ' ಇದನ್ನು **ಕತೆ ಕಟ್ಟುವ ಪದ್ಧತಿ** ಎನ್ನಬಹುದು.'

'ಸಾವಧಾನವಾಗಿ ರಚಿಸಿದ ಕೃತಿಯಾದ್ದರಿಂದ ಇಂಥ ಕತೆಯಲ್ಲಿ ಕಲೆ ಸ್ಪಷ್ಟವಾಗಿರುತ್ತದೆ. ಕತೆಗಾರನು ಕತೆಯನ್ನು ಆರಂಭಿಸುವಲ್ಲಿ, ನಡೆಸುವಲ್ಲಿ, ಬೆಳೆಸುವಲ್ಲಿ ಉದ್ದಕ್ಕೂ ತನ್ನ ಕೈವಾಡವನ್ನು ತೋರಿಸುತ್ತಿರುತ್ತಾನೆ........ಇದು ಸಾಹಿತ್ಯದ ಪ್ರೌಢಾವಸ್ಥೆಯ ಪದ್ಧತಿ.'—ಶ್ರೀನಿವಾಸ

ಈ ಪದ್ಧತಿಗಳಿಂದ ಮಾರ್ಗ ಕಥಾಸೃಷ್ಟಿ ಬೆಳೆಯಿತು.

### ೩. ಮಾರ್ಗ ಕಥಾಸ್ವರೂಪ :

ಪ್ರಾಚೀನ ಭಾರತದ ಮಾರ್ಗ ಕಥಾಸೃಷ್ಟಿ ಹುಲುಸಾಗಿ ಬೆಳೆದಿದೆ. ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಅದು ಪ್ರಕಟ-ವಾಗಿದೆ. ಉಳಿದ ಎಲ್ಲ ರೂಪಗಳಂತೆ ಕಥಾಸೃಷ್ಟಿಯಲ್ಲಿಯೂ ಪ್ರಾದೇಶಿಕ ಭಾಷೆಗಳಿಗೆ ಸಂಸ್ಕೃತ-ಪ್ರಾಕೃತ ಸಾಹಿತ್ಯಗಳೇ ಮೂಲಶಕ್ತಿಯನ್ನು ಒದಗಿಸಿವೆ. ವೇದ-ಉಪನಿಷತ್ತಿನ ಕತೆ-ಗಳು, ಪುರಾಣದೊಳಗಿನ ಕತೆಗಳು, ಇತಿಹಾಸದೊಳಗಿನ ಕತೆ-ಗಳು, ಪಂಚತಂತ್ರ, ಹಿತೋಪದೇಶ, ಬೃಹತ್ಕಥಾಮಂಜರಿ, ಕಥಾಸರಿತ್ಸಾಗರ, ಕಥಾಮೃತ, ಕಥಾಕೋಶ, ಬುದ್ಧಜಾತಕ ಕತೆಗಳು, ಜೈನ ಧಾರ್ಮಿಕ ಕತೆಗಳು, ಭವವಾಳಿ ಕತೆಗಳು—ಹೀಗೆ ಅಸಂಖ್ಯಾತ ಕತೆಗಳು ಬೆಳೆದು ಬಂದಿವೆ. ಧರ್ಮ, ನೀತಿ, ವ್ಯವಹಾರಜ್ಞಾನ, ರಾಜನೀತಿ, ಮನೋರಂಜನೆ ಅವುಗಳ ಗುರಿ.

ಇಂತಹ ಬಹಳಷ್ಟು ಕತೆಗಳು ಕನ್ನಡ ಸಾಹಿತ್ಯದಲ್ಲಿಯೂ ಇಳಿದು ಬಂದಿವೆ.

**೪. ಪ್ರಯೋಜನ :**

ಅರಸುಮಕ್ಕಳ ಶಿಕ್ಷಣಕ್ಕೆ ಕತೆಗಳನ್ನು ಬಳಸಿದ ಉದಾಹರಣೆ 'ಪಂಚತಂತ್ರ'ದಲ್ಲಿ ಕಾಣಬಹುದು. ಧರ್ಮಪ್ರಚಾರಕ್ಕೆ, ನೀತಿಬೋಧೆಗೆ ಕತೆ ಒಳ್ಳೆಯ ಪ್ರಭಾವಿ ಸಾಧನವಾಗಿತ್ತು. ಮನೋರಂಜನೆ ಕತೆಯ ಸಹಜಶಕ್ತಿಯಾಗಿ ಎಂದಿನಿಂದಲೂ ಪ್ರಕಟವಾಗಿದೆ. ಜೀವನ ಎಷ್ಟು ವಿಶಾಲವಾದುದೋ ವೈವಿಧ್ಯವುಳ್ಳುದೋ ಅಷ್ಟು ವೈಶಾಲ್ಯ ವೈವಿಧ್ಯಗಳನ್ನು ಈ ಕತೆಗಳಲ್ಲಿ ಕಾಣಬಹುದು.

**೫. ಮಾರ್ಗ ಕಥಾಸೃಷ್ಟಿಯ ಸ್ಥಿತಿಗತಿ :**

ಬುಧಸ್ವಾಮಿ, ಕ್ಷೇಮೇಂದ್ರ, ಸೋಮದೇವ, ಪ್ರಭಾಚಂದ್ರ, ಹರಿಷೇಣ, ಗುಣಾಢ್ಯ, ವಸುಭಾಗಭಟ್ಟ, ವಿಷ್ಣುಶರ್ಮ ಮುಂತಾದವರು ಆಗಿನ ಕಾಲದ ಅಸಾಮಾನ್ಯ ಪ್ರತಿಭೆಯುಳ್ಳ ಗಣ್ಯಕಥೆಗಾರರು. ಜನಪದ ಜೀವನದಲ್ಲಿ ಅತ್ಯಂತ ಪ್ರಚಾರದಲ್ಲಿರುವ ಕತೆಗಳನ್ನು ಸಂಗ್ರಹಿಸಿದರು; ಹೊಸ ಕತೆಗಳನ್ನೂ ಸೃಷ್ಟಿಸಿ ಅವುಗಳ ಜೊತೆಗೆ ಸೇರಿಸಿದರು. ಇದ್ದ ಕತೆಗಳನ್ನು ತಿದ್ದಿ ಬರೆದು ಜೋಡಿಸಿದರು. ಇವರ ಬುದ್ಧಿಶಕ್ತಿಯಿಂದಲೇ ಸಂಪ್ರದಾಯ ಉಂಟಾಯಿತು. ಸಾಹಿತ್ಯ ಸೃಷ್ಟಿಯಾಯಿತು. ಮಾರ್ಗ ರಚನೆಯಾಯಿತು.

ವೇದದ ಕತೆಗಳು, ವೇದಾಂತ ಕತೆಗಳು, ಉಪನಿಷತ್ತಿನ ಕತೆಗಳು, ರಾಮಾಯಣ, ಮಹಾಭಾರತ, ಕಾದಂಬರಿ, ಪುರಾಣಗಳು, ಚರಿತ್ರೆಗಳು—ಮಾರ್ಗ ಕಥಾಸೃಷ್ಟಿಯಲ್ಲಿ ಅಸಾಮಾನ್ಯ ಸ್ಥಾನಮಾನಗಳನ್ನು ಆಕ್ರಮಿಸಿವೆ. ಅನೇಕ ಕಾವ್ಯಗಳು ಇಂಥ ಕಥಾಸೃಷ್ಟಿಯನ್ನು ವಿಶ್ವವ್ಯಾಪಕ ಶಕ್ತಿಯನ್ನಾಗಿ ಮಾಡಿ ಸಂಸ್ಕೃತಿಯ ಸೌಧಗಳನ್ನು ನಿರ್ಮಿಸಿವೆ; ನಮ್ಮ ಇಂದಿನ ಜೀವನ ಹಸನುಗೊಳ್ಳಲು, ಹೊಸತನ ಹೊಂದಲು, ಸರ್ವಶಕ್ತಿಸಾಮರ್ಥ್ಯಗಳ ಮೂಲ ಸಂಜೀವಿನಿಯಾಗಿ ನಿಂತಿವೆ.

---

# ಹಳಗನ್ನಡ ಕಥಾಸೃಷ್ಟಿ

## ೧. ಉಗಮ ಮತ್ತು ಸ್ವರೂಪ ರಚನೆ :

ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ, ಆದರಂತೆ ಹಳ-ಗನ್ನಡ ಸಾಹಿತ್ಯದಲ್ಲಿ ಕೂಡ ಗದ್ಯಕ್ಕಿಂತ ಪದ್ಯಕ್ಕೆ ಪ್ರಾಧಾನ್ಯ. ಮಹಾಕಾವ್ಯಕ್ಕೆ ಪದ್ಯವಾಹಕವಾದರೆ ಚರಿತ್ರೆ ಕತೆಗಳಿಗೂ ಪದ್ಯವೇ ಬೇಕು. ರೋಗಿಯ ಚಿಕಿತ್ಸೆ, ರೋಗದ ಲಕ್ಷಣ, ಔಷಧಗಳನ್ನು ತಿಳಿಸಿ ಹೇಳುವ ವೈದ್ಯಶಾಸ್ತ್ರವೂ ಕೂಡ ಪದ್ಯ-ದಲ್ಲಿಯೇ ಬರೆಯಲ್ಪಟ್ಟಿದೆ. ವ್ಯಾಕರಣವೂ ಕೂಡ ಪದ್ಯ-ದಲ್ಲಿಯೇ ಇದೆ. ಇದಕ್ಕೆ ಕಾರಣ, ಆಗಿನ ಕಾಲದ ಎಲ್ಲ ಗ್ರಂಥಗಳನ್ನು ಅಭ್ಯಾಸಮಾಡುವವರು ಕಂಠಪಾಠಮಾಡಿ. ನೆನಪಿನಲ್ಲಿ ಇಟ್ಟುಕೊಳ್ಳಬೇಕಾಗುತ್ತಿತ್ತು. ಕಂಠಪಾಠಕ್ಕೆ ಗದ್ಯ ಕ್ಕಿಂತ ಪದ್ಯವೇ ಅನುಕೂಲವೆಂಬುದನ್ನು ಎಲ್ಲರೂ ಬಲ್ಲರು. ಇರಲಿ, ಕೃತಿ ಗದ್ಯವಿರಲಿ, ಪದ್ಯವಿರಲಿ, ಕಥಾಸೃಷ್ಟಿಗೆ ಸೇರಿದವು ಗಳನ್ನು ಪ್ರತ್ಯೇಕಿಸಿದರೆ ಅದು ಒಂದು ದೊಡ್ಡ ಗ್ರಂಥರಾಶಿಯೇ ಆಗಬಹುದು. ದೃಶ್ಯ, ಶ್ರವ್ಯ, ಮಿಶ್ರ—ರೂಪಗಳಲ್ಲಿ ಶ್ರವ್ಯ ಕೃತಿಗಳಲ್ಲಿ ಹಾಡೂ, ಕತೆಗಳೂ ಹೆಚ್ಚಾಗಿವೆ; ದೃಶ್ಯದಲ್ಲಿ ನಾಟಕ ಗಳಿವೆ. ಮಿಶ್ರದಲ್ಲಿ ಎಲ್ಲವೂ ಉಂಟು. ವಸ್ತುಕ, ವರ್ಣಕ ಕೃತಿಗಳಲ್ಲಿ ಕಥಾಸೃಷ್ಟಿ ವಸ್ತುಕಗಳಲ್ಲಿಯೇ ಉಂಟು. ಗದ್ಯ-ಪದ್ಯ ಕೃತಿಗಳಲ್ಲಿ ಪದ್ಯಕ್ಕಿಂತ ಗದ್ಯದಲ್ಲಿಯೇ ಕತೆಗಳು ಹೆಚ್ಚು.

ಆಗಿನ ಕಾಲದಲ್ಲಿ ಕವಿ, ಕತೆಗಾರ ಎಂಬ ಬೇರೆ ಬೇರೆ ಹೆಸರುಗಳಿರಲಿಲ್ಲ. ಲಲಿತ ಸಾಹಿತ್ಯ ನಿರ್ಮಾಣ ಮಾಡಿದವರೆಲ್ಲರೂ ಕವಿಗಳೆಂದೇ ತಿಳಿಯಲಾಗುತ್ತಿತ್ತು. ಸರ್ವಸಾಮಾನ್ಯವಾಗಿ ಕೃತಿ ಎಂಥದೇ ಇದ್ದರೂ ಅದರಲ್ಲಿ ಕಥಾವಸ್ತು ಇದ್ದೇ ಇರುತ್ತದೆ. ಆದರೆ 'ಕತೆಗಾಗಿ ಕತೆ' ಎಂಬ ಮಾತನ್ನು ಕಣ್ಣ-ಮುಂದೆ ಇಟ್ಟುಕೊಂಡು ಅಂಥ ಕತೆಯ ಪುಸ್ತಕಗಳನ್ನು ಅವಲೋಕಿಸೋಣ.

## ೨. ಹಳಗನ್ನಡದ ಕೆಲವು ಕಥಾಸಂಗ್ರಹಗಳು :

ಗುಣಾಢ್ಯನ 'ಬೃಹತ್ಕಥೆ' ಪೈಶಾಚಿ ಭಾಷೆಯಲ್ಲಿ ಇದೆ. ಸಂಸ್ಕೃತದಲ್ಲಿಯೂ ಅದು ಭಾಷಾಂತರವಾಗಿದೆ. ಅದು ಒಂದು ಹಿರಿಯ ಕಥಾಸಂಗ್ರಹ. ಕವಿರಾಜಮಾರ್ಗದಲ್ಲಿ ಉಕ್ತವಾದ ಕನ್ನಡ ಗದ್ಯಕಾರ ದುರ್ವಿನೀತನು ಈ 'ಬೃಹತ್ಕಥೆ'ಯನ್ನು 'ವಡ್ಡಕಥಾ' ಎಂಬ ಹೆಸರಿನಲ್ಲಿ ಕನ್ನಡಿಸಿರಬೇಕು ಎಂದು ಸಾಹಿತ್ಯ ಚರಿತ್ರಕಾರರ ಅಭಿಪ್ರಾಯ. ವಡ್ಡಕಥೆ, ಕಿರಾತಾ-ರ್ಜುನೀಯ ಟೀಕೆ, ಶಬ್ದಾವತಾರ ಅವನು ಬರೆದ ಗ್ರಂಥಗಳು. ಆದರೆ ಒಂದೂ ಗ್ರಂಥ ದೊರೆತಿಲ್ಲ. ದೊರೆತರೆ **ದುರ್ವಿನೀತನೇ** (೫೫೦–೬೦೦) ಕನ್ನಡ ಮೊದಲ ಕತೆಗಾರನೆಂದು ಹೇಳಬಹುದು.

### (೧) **ವಡ್ಡಾರಾಧನೆ** (ಸು. ೯೫೦)

ಉಪಲಬ್ಧ ಗ್ರಂಥಗಳನ್ನು ಕಣ್ಣ ಮುಂದೆ ಇಟ್ಟುಕೊಂಡು ಹೇಳುವುದಾದರೆ ವಡ್ಡಾರಾಧನೆಯೇ ಕನ್ನಡದ ಮೊದಲನೆಯ

ಕಥಾಸಂಗ್ರಹ. ಅದರ ಕರ್ತೃವಾದ **ಶಿವಕೋಟ್ಯಾಚಾರ್ಯನೇ** ಕನ್ನಡ ಸಾಹಿತ್ಯದಲ್ಲಿ ಮೊದಲನೆಯ ಕತೆಗಾರ.

ಶಿವಕೋಟಿಯು ಬರೆದ 'ಭಗವತೀ ಆರಾಧನಾ' ಎಂಬ ಪ್ರಾಕೃತ ಗ್ರಂಥದ ಆಧಾರದ ಮೇಲೆ ಅನೇಕ ವ್ಯಾಖ್ಯಾನಗಳೂ ಕಥಾಕೋಶಗಳೂ ಹುಟ್ಟಿವೆ. ಪ್ರಭಾಚಂದ್ರ ಹರಿಷೇಣರು ಅದರ ಆಧಾರದ ಮೇಲೆಯೇ ಕಥಾಕೋಶಗಳನ್ನು ಬರೆದಿದ್ದಾರೆ. ಹರಿಷೇಣನ ಕೃತಿಗೂ ಕನ್ನಡ 'ವಡ್ಡಾರಾಧನೆ'ಗೂ ಬಹಳ ಕಡೆ ಸಾಮ್ಯವಿದೆ. ಅದರಂತೆ ವ್ಯತ್ಯಾಸಗಳೂ ಸಾಕಷ್ಟು ಉಂಟು. ಏನೇ ಇದ್ದರೂ, 'ಭಗವತಿ ಆರಾಧನೆ'ಯ ಯಾವುದೋ ಒಂದು ಪ್ರಾಕೃತ ವ್ಯಾಖ್ಯಾನ ಗ್ರಂಥದ ಆಧಾರದ ಮೇಲೆ ಇದು ಬರೆಯಲ್ಪಟ್ಟಿರಬೇಕು.

ವಡ್ಡಾರಾಧನೆಯು ಜೈನ ಧಾರ್ಮಿಕ ಗದ್ಯ ಕತೆಗಳ ಸಂಗ್ರಹ. ಇದರಲ್ಲಿ ಹತ್ತೊಂಬತ್ತು ಕತೆಗಳಿವೆ. ವೃಷಭಸೇನ ಭಟ್ಟಾರ, ಗಜಕುಮಾರ, ವಿದ್ಯುಚ್ಚೋರನೆಂಬ ರಿಸಿಯ ಕತೆಗಳು ಬಹಳೇ ಸೊಗಸಾಗಿವೆ. ಸಂಭಾಷಣಾ ಚಾತುರ್ಯ, ಶಕ್ತಿಯುತ ದೇಶಿಯ ಬಳಕೆ, ಆಕರ್ಷಕವಾದ ಗದ್ಯಶೈಲಿ, ಮನಸ್ಸನ್ನು ಸೆರೆಹಿಡಿಯುವ ಕಥಾಸರಣಿ ಈ ಕೃತಿಗೆ ಕಳೆ ತಂದು ಕೊಟ್ಟಿವೆ.

### (೨) ಚಾವುಂಡರಾಯ ಪುರಾಣ (೯೭೮)

ಹಳಗನ್ನಡದಲ್ಲಿ ವಡ್ಡಾರಾಧನೆಯ ತರುವಾಯ ಶ್ರೇಷ್ಠ ಗದ್ಯ ಕಥಾಗ್ರಂಥವೆಂದರೆ ಚಾವುಂಡರಾಯ ಪುರಾಣವೇ. ಜೈನರ

೬೩ ಶಲಾಕಾಪುರುಷರ ಕಥೆಗಳ ಸಂಗ್ರಹವಿದು. ಜಿನಸೇನ ಮತ್ತು ಗುಣಭದ್ರರ ಸಂಸ್ಕೃತ 'ಮಹಾಪುರಾಣ'ವೇ ಇದಕ್ಕೆ ಆಧಾರ. ಅದರ ಸ್ವರೂಪವನ್ನು ಗಂಭೀರ, ಧಾರಾಳ, ಚೊಕ್ಕಟ ಎಂಬ ಮೂರು ಮಾತುಗಳಲ್ಲಿ ಅಡಕಗೊಳಿಸಿ ಹೇಳಬಹುದು. ಹೀಗೆ ಕನ್ನಡ ಸಾಹಿತ್ಯದಲ್ಲಿ ಚಾವುಂಡರಾಯನ ಸ್ಥಾನವು ಕಥನಕವಿ ಎಂಬುದಕ್ಕಿಂತ ಮೇಲಾದ ಗದ್ಯಕಾರನೆಂದಾಗಿದೆ.' — **ಡಾ. ಮುಗಳಿ.** ಕಲ್ಲಿನಲ್ಲಿ ಗೊಮ್ಮಟನನ್ನು ಮಾಡಿ ನಿಲ್ಲಿಸಿದ **ಚಾವುಂಡರಾಯ** ಗ್ರಂಥದಲ್ಲಿಯೂ ಪುರಾಣವೊಂದನ್ನು ಅಮರವಾಗಿಸಿದ.

## (೩) ಪಂಚತಂತ್ರ (೧೦೩೧)

ವಸುಭಾಗ ಭಟ್ಟನ ಸಂಸ್ಕೃತ ಕೃತಿಯ ಆಧಾರದ ಮೇಲೆ ದುರ್ಗಸಿಂಹನು ಕನ್ನಡದಲ್ಲಿ ಈ ಕೃತಿ ರಚನೆ ಮಾಡಿದನು. ಸಂಸ್ಕೃತದಲ್ಲಿ ಇನ್ನೊಂದು ವಿಷ್ಣುಶರ್ಮನ 'ಪಂಚತಂತ್ರ' ಪ್ರಸಿದ್ಧವಾಗಿದೆ. ವಸುಭಾಗಭಟ್ಟನ ಕೃತಿ ಸಂಸ್ಕೃತದಲ್ಲಿ ಇದೆ ಎಂಬ ಅಂಶ ಮೊಟ್ಟಮೊದಲು ಕನ್ನಡ 'ಪಂಚತಂತ್ರ'ದಿಂದಲೇ ತಿಳಿದುಬಂತು.

ಪ್ರೌಢ-ಸರಳ ಹಾಗೂ ಗದ್ಯ-ಪದ್ಯ ಮಿಶ್ರವಾದ ಚಂಪೂ ಶೈಲಿಯಲ್ಲಿ ತೀರ ಹೊಸ ರೀತಿಯಲ್ಲಿ **ದುರ್ಗಸಿಂಹನು** ಈ ಗ್ರಂಥ ರಚನೆಮಾಡಿದ್ದಾನೆ. ಅನೇಕ ಕತೆಗಳನ್ನು ನೀತಿಶಾಸ್ತ್ರ ಪ್ರವಚನಕ್ಕಾಗಿ ಬಳಸಲಾಗಿದೆ. ಪಶು–ಪಕ್ಷಿ ಸಂಬಂಧವಾದ ಸಾಂಕೇತಿಕ ಕತೆಗಳೂ ಉಂಟು. ಒಳ್ಳೆಯ ಅನುವಾದಕನ

ಶಕ್ತಿಯನ್ನು ಈ ಕೃತಿಯಲ್ಲಿ ಕಾಣಬಹುದು. ವರ್ಣನೆ, ಕಥಾವಿಸ್ತರಣೆಗಳಲ್ಲಿ ಸ್ವಂತ ಪ್ರತಿಭೆಯನ್ನು ತೋರಿದ್ದಾನೆ. 'ಶಿವಭೂತಿಯ ಕತೆ' ಯಲ್ಲಿ ಒಳ್ಳೆಯ ಕಥಾಸರಣಿಯೊಂದಿಗೆ ಹಾಸ್ಯದ ಗೆರೆಗಳನ್ನು ಕಾಣುತ್ತೇವೆ. ಬಹುಶಃ ಎಲ್ಲ ಕತೆಗಳು ಮನೋರಂಜನೆಯ ಜೊತೆಗೆ ನೀತಿಬೋಧೆಯನ್ನೂ ಮಾಡುತ್ತವೆ.

## (೪) ಧರ್ಮಾಮೃತ (೧೧೧೨)

''ಕತೆಗಳನ್ನು ಮತಪ್ರಚಾರಕ್ಕೆ ಉಪಯೋಗಿಸಿಕೊಂಡು ಅವುಗಳಿಗೆ ಮೊದಲು ಜೀವಕಳೆಯನ್ನು ತುಂಬಿ ಕಳಕಳಿಸು ವಂತೆ ಮಾಡಿದವನು **ನಯಸೇನ**"—ಜಿ. ವೆಂಕಟಸುಬ್ಬಯ್ಯ. ಧರ್ಮಾಮೃತವು ಯಾವ ಒಂದು ಸಂಸ್ಕೃತ ಗ್ರಂಥದ ಅನುವಾದ ವಲ್ಲ. ಕತೆಗಳನ್ನು ಬೇರೆ-ಬೇರೆ ಕಡೆಯಿಂದ ಆರಿಸಿ, ಇಲ್ಲವೆ ಸ್ವಂತ ಕಲ್ಪನೆಯಿಂದ ಸೃಷ್ಟಿಸಿ ಈ ಕೃತಿ ರಚಿಸಿದ್ದಾನೆ. ಹೇಳುವ ರೀತಿಯಲ್ಲಿ ಹೊಸಮಾರ್ಗವನ್ನು ಅನುಸರಿಸಿದ್ದಾನೆ.

**ನಯಸೇನನ** ಬರವಣಿಗೆಯ ಗುಣವಿಶೇಷವೆಂದರೆ ಕತೆ ಯನ್ನು ಹೇಳಹೇಳುತ್ತಲೇ ರಾಶಿ-ರಾಶಿಯಾಗಿ ಅವನು ತೂರುವ ಸಾದೃಶ್ಯಮಾಲಿಕೆ. 'ನಯಸೇನನ ಕತೆಗಳಲ್ಲಿ ನಮ್ಮನ್ನು ಮೋಹಿಸುವ ಪ್ರಬಲವಾದ ಅಂಶವೆಂದರೆ ಅಲ್ಲಿ ದೊರೆಯುವ ಜನಜೀವನದ ಚಿತ್ರ.' 'ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ' — ಇದು ನಯಸೇನನ ಶೈಲಿಯ ಆದರ್ಶ. 'ಮಿಸುಕದ ಸಕ್ಕದ' ವನ್ನು ಇಕ್ಕುವವರನ್ನು ಕಡೆಗಣಿಸಿ

'ಸುದ್ದಗನ್ನಡ'ದಲ್ಲಿ ಬರೆಯಬೇಕೆಂದು ಅವನು ಸೂಚಿಸುತ್ತಾನೆ. ಜನತೆಯ ಕವಿಗಳೆಂದು ಹೆಸರಾದ ಕನ್ನಡ ಕಲೋಪಾಸಕರಲ್ಲಿ **ನಯಸೇನನು** ತೀರ ಎತ್ತರದಲ್ಲಿ ಅಲ್ಲದಿದ್ದರೂ ಎದ್ದುಕಾಣುವ ನೆಲೆಯಲ್ಲಿ ಕೂಡ ಬಲ್ಲ 'ನಿರುಪಮ ಸಹಜಕವಿ'–ಡಾ. ಮುಗಳಿ ಯವರ ಅಭಿಪ್ರಾಯವಿದು.

ಹದಿನಾಲ್ಕು ತತ್ವಗಳನ್ನು ಕುರಿತು ೧೪ ಮುಖ್ಯ ಕತೆಗಳನ್ನು ಪ್ರತಿಯೊಂದು ಆಶ್ವಾಸದಲ್ಲಿ ಹೆಣೆದಿದ್ದಾನೆ. ಇದು ೧೪ ಮುಖ್ಯ ಕತೆಗಳ ಸಂಗ್ರಹವಾದರೂ ಅನೇಕ ಉಪಕತೆಗಳು ಅಲ್ಲಲ್ಲಿ ತುಂಬಿಕೊಂಡಿವೆ. ಇವುಗಳಲ್ಲಿ ಮುನಿ ಹೇಳಿದ ಕತೆ, ಸೂರ್ಪನೆಂಬ ಕಳ್ಳನ ಕತೆಗಳು ಆಕರ್ಷಕವಾಗಿವೆ. ಅಹಿಂಸೆಯ ಕತೆ ಹಾಸ್ಯಭರಿತವಾಗಿದೆ.

## (೫) **ಸಮಯ ಪರೀಕ್ಷೆ** (ಸು. ೧೧೫೦)

ಇದು ಕಂದ ವೃತ್ತಗಳ ೧೫ ಪ್ರಕರಣಗಳುಳ್ಳ ವಿಸ್ತಾರವಾದ ಗ್ರಂಥ. ಧರ್ಮಪ್ರಭಾವ ಇದರ ಉದ್ದೇಶ. ಇದರ ಕರ್ತೃವಾದ ಬ್ರಹ್ಮಶಿವನು ವಿಡಂಬನಾತ್ಮಕ ಭಾಗಗಳಲ್ಲಿ ಮೂಢ ನಂಬಿಕೆಗಳ ಮತ್ತು ಆಚಾರ ಪದ್ಧತಿಗಳ ವರ್ಣನೆಮಾಡಿದ್ದಾನೆ. ನಯಸೇನನಿಗಿಂತ ಬ್ರಹ್ಮಶಿವನಲ್ಲಿ ವಿಡಂಬನಶಕ್ತಿ ಹರಿತವಾಗಿದೆ. ಜನಜೀವನದ ಚಿತ್ರ ಇಲ್ಲಿಯಷ್ಟು ನೇರವಾಗಿ, ಸ್ಪಷ್ಟವಾಗಿ ಕನ್ನಡ ಸಾಹಿತ್ಯದ ಹಳೆಯ ಕಾವ್ಯಗಳಲ್ಲಿ ಬೇರೆಡೆಯಲ್ಲಿ ದೊರೆಯುವುದು ದುರ್ಲಭ.

## (೬) ಪುಣ್ಯಾಸ್ರವ (೧೩೩೧)

**ನಾಗರಾಜನು** ತನ್ನ ಈ 'ಪುಣ್ಯಾಸ್ರವ' ಚಂಪೂ ಕೃತಿಯಲ್ಲಿ ಶ್ರಾವಕಧರ್ಮವನ್ನು ಅಂದರೆ ಗೃಹಸ್ಥ ಧರ್ಮವನ್ನು ವಿವರಿಸಿ ಒಂದೊಂದು ಗುಣದಲ್ಲಿ ಪ್ರಸಿದ್ಧಿಯನ್ನು ಪಡೆದ ೫೨ ಮಹಾಪುರುಷರ ಕತೆಗಳನ್ನು ಹೇಳಿದ್ದಾನೆ. ಸಂಸ್ಕೃತದಿಂದ ಅನುವಾದ ಮಾಡಿದ ಗ್ರಂಥವಿದು. 'ನಾಗೇಂದ್ರನ ನಿಜಕವಿತೆಯು ಕನ್ನಡ ನುಡಿಯು ಬೆಡಗು ಸಕ್ಕರೆಯು ಹಾಗೆ ಸಿಹಿ' ಎಂದು ಕವಿಯೇ ತನ್ನ ಬಗ್ಗೆ ಹೇಳಿಕೊಂಡಿದ್ದಾನೆ.

## (೭) ಧರ್ಮಪರೀಕ್ಷೆ (ಸು. ೧೩೫೦)

**ವೃತ್ತವಿಲಾಸನು** ಬರೆದ ಅದೇ ಹೆಸರಿನ ಸಂಸ್ಕೃತ ಗ್ರಂಥದ ಕನ್ನಡ ಅನುವಾದವಿದು. ನಯಸೇನನ ಪರಂಪರೆಯನ್ನೇ ಇವನೂ ಅನುಸರಿಸಿದ್ದಾನೆ. ಸುಲಭ ಚಂಪೂಶೈಲಿಯಲ್ಲಿ ಜೈನತ್ವದ ಉತ್ಕೃಷ್ಟತೆಯನ್ನು ಪ್ರಕಟಿಸುವ ಕತೆಗಳು ಇದರಲ್ಲಿ ಇವೆ. ಕಥೆಗಳು ಬಹಳ ರಸಭರಿತವಾಗಿವೆ, ಆಕರ್ಷಕವಾಗಿವೆ.

## (೮) ಅಭಿನವ ದಶಕುಮಾರ ಚರಿತೆ (ಸು. ೧೩೦೦)

ದಂಡಿಯ ಕೃತಿಯ ಅನುವಾದವಿದು. ಲೌಕಿಕ ಕತೆಗಳು, ಜಾರ-ಚೋರರ ಸಾಹಸದ ಕತೆಗಳು ಇದರಲ್ಲಿ ಬಂದಿವೆ. 'ಕಥನ ಕಲೆಯಲ್ಲಿ ಸಹಜಗತಿ ಇದೆ' ಆದರೆ 'ಉದ್ದೇಶ ಮಿಶ್ರಣದಿಂದ ಏಕಾಗ್ರತೆಯನ್ನು ಕಳೆದುಕೊಂಡಿದೆ' ಎಂದಿದ್ದಾರೆ ಡಾ. ಮುಗಳಿ.

**ಚೌಂಡರಸ**ನೆಂಬ ಬ್ರಾಹ್ಮಣಕವಿ ಇದನ್ನು ಬರೆದಿದ್ದಾನೆ. ೧೪ನೆಯ ಆಶ್ವಾಸದ ವಿಶ್ರುತನ ಕಥೆಯಲ್ಲಿ ಪಂಡರಾಪೂರದ ಉಲ್ಲೇಖವಿದೆ. ಕವಿಯೂ ಕೂಡ ಪಂಡರಾಪೂರದವನೇ ಇದ್ದಿರ ಬಹುದೆಂದು ಕೆಲವು ಪಂಡಿತರ ಅಭಿಪ್ರಾಯವಿದೆ.

(೯) ದೇವರಾಜನ **ಸೊಬಗಿನ ಸೋನೆ** ಸಾಂಗತ್ಯದಲ್ಲಿ ಬರೆದ ಏಳುಕತೆಗಳ ಸಂಗ್ರಹ. ಲಕ್ಕಣ್ಣ ದಂಡೇಶನ **''ಶಿವ ತತ್ತ್ವ ಚಿಂತಾಮಣಿ'** ಯಲ್ಲಿ ಕೆಲವು ಕತೆಗಳು ಬರುತ್ತವೆ. ಗುಬ್ಬಿಯ ಮಲ್ಲಣಾರ್ಯನ **'ವೀರಶೈವಾಮೃತ ಪುರಾಣ'** ದಲ್ಲಿ ಶಿವಲೀಲೆಗಳು, ಪುರಾತನ ನೂತನ ಶರಣರ ಕತೆಗಳು ಉಂಟು. ಬೊಮ್ಮರಸನ **'ಸೌಂದರ ಪುರಾಣ'**, ಸುರಂಗ ಕವಿಯ **'ತ್ರಿಷಷ್ಟಿ ಪುರಾತನ ಚರಿತ್ರೆ'**, ನೀಲಕಂಠಾಚಾರ್ಯನ **'ಆರಾಧ್ಯಚರಿತ್ರೆ'** ಮುಂತಾದ ಕೃತಿಗಳಲ್ಲಿ ಕತೆಗಳು ಹೇರಳ ವಾಗಿ ಬರುತ್ತವೆ.

ಜೀವಂಧರ ಚರಿತೆ, ಅಂಜನಾಚರಿತೆ, ಸಮ್ಯಕ್ತ್ವಕೌಮುದಿ ಪ್ರಭಂಜನ ಚರಿತೆ, ಶ್ರೀಪಾಲ ಚರಿತೆ, ನಾಗಕುಮಾರ ಚರಿತೆ, ಬ್ರಹ್ಮಕೊರವಂಜಿ ಮುಂತಾದ ಹಲವಾರು ಚರಿತ್ರೆಗಳು, ಕತೆಗಳು ೧೬–೧೭–೧೮ ಶತಮಾನಗಳಲ್ಲಿ ಸಾಕಷ್ಟು ಬಂದಿವೆ.

## (೧೦) ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ (೧೬೭೨)

ಶಾಂತಲಿಂಗ ದೇಸಿಕನು ಬರೆದ ಗದ್ಯ ಗ್ರಂಥವಿದು. ಕಿಕ್ಕೇರಿಯಾರಾಧ್ಯ ನಂಜುಂಡೇಶನ ಭೈರವೇಶ್ವರನ ಕಾವ್ಯಕ್ಕೆ

ವಿವರಣರೂಪವಾಗಿದೆಯಿದು. ಇದರಲ್ಲಿ ೮೧ ಕತೆಗಳಿವೆ. 'ಕತೆಗಳು ಅತ್ಯಂತ ಸ್ವಾರಸ್ಯವಾಗಿವೆ. ಮುಖ್ಯ ಕತೆಗೆ ಪರಿಪೋಷಕವಾಗಿ ಬರುವ ಉಪಕಥೆಗಳು ದೃಷ್ಟಾಂತಗಳು ಓದುಗರ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನು ಉಂಟುಮಾಡುತ್ತವೆ'— ಎನ್. ಬಸವಾರಾಧ್ಯ.

**೩. ಹಳಗನ್ನಡ ಕತೆಗಳ ರೂಪ–ಉದ್ದೇಶ–ಸ್ಥಿತಿ–ಗತಿ:**

ಹೀಗೆ ಹಳಗನ್ನಡ ಸಾಹಿತ್ಯದಲ್ಲಿ ಅಸಂಖ್ಯ ಸಣ್ಣ ಕತೆಗಳು ದೊರೆಯುತ್ತವೆ, ದೊಡ್ಡ ಕತೆಗಳೂ ದೊರೆಯುತ್ತವೆ. ಆಧುನಿಕ ಸಣ್ಣಕತೆಗಳು ಹಳೆಯ ಸಣ್ಣಕತೆಗಳಂತೆ ಅಲ್ಲ. ತಂತ್ರದಿಂದ, ಲಕ್ಷಣಗಳಿಂದ ತೀರ ಭಿನ್ನವಾದ ಕತೆಗಳಿವು. 'ಹೆಚ್ಚು ಕಾಲ ಹೇಳಬಹುದಾದ ಕತೆ ಸಣ್ಣ ಕತೆ, ಇಷ್ಟೇ' – ಅಂದಿನವರ ತಿಳಿವಳಿಕೆಯಲ್ಲಿ! ಹಳಗನ್ನಡ ಸಾಹಿತ್ಯದಲ್ಲಿ ಬರುವ "ಎಲ್ಲ ಕತೆಗಳ ಗುರಿ ನೀತಿ ತತ್ವ ಬೋಧನೆ, ಇಲ್ಲವೆ ಕೇವಲ ಮನೋರಂಜನೆ ಆಗಿರುತ್ತಿತ್ತು. ಸ್ವಾಭಾವಿಕವಿರಲಿ, ಅಸ್ವಾಭಾವಿಕವಿರಲಿ, ವಿಸ್ಮಯಕಾರಕವಾದ, ಚಮತ್ಕೃತಿಯಿಂದ ಕೂಡಿದ ಘಟನೆಯನ್ನೋ, ಘಟನಾವಳಿಯನ್ನೋ ಹೇಳುತ್ತಿದ್ದರಾಯಿತು, ಅದೊಂದು ಕಥೆ ಎಂದು ನಮ್ಮವರ ತಿಳಿವಳಿಕೆ. ಅಂತಹ ಕತೆಗಳನ್ನು ಪ್ರೀತಿಯಿಂದ ಕೇಳುವವರು ಅಂದಿನ ಕಾಲದಲ್ಲಿ ಸಾಕಷ್ಟು ಜನರಿದ್ದರು. ಯಾವ ವಿಶಿಷ್ಟ ಲಕ್ಷಣಗಳ ಒರೆಗಲ್ಲಿಗೂ ತಿಕ್ಕಿನೋಡುವ ಕಾರಣವಿರಲಿಲ್ಲ: ಜನರಲ್ಲಿ ಆ ಅರಿವೂ ಇರಲಿಲ್ಲ. ಮಾನವ ನೀತಿಯ ಪ್ರಚಾರಕ್ಕಾಗಿಯೋ, ಮತಧರ್ಮ ಪ್ರಸಾರಕ್ಕಾಗಿಯೋ, ಅವು ನಿರ್ಮಿತವಾದವು."–ಬೆಟಗೇರಿ ಕೃಷ್ಣಶರ್ಮ.

ಅಂದಿನ ಕತೆಗಳೆಲ್ಲ ವಸ್ತುಪ್ರಧಾನವಾದವು. ಪಾತ್ರಪ್ರಧಾನ-ವಾದ ಕತೆಗಳು, ಸೂಕ್ಷ್ಮ ಹೋರಾಟದ ಕತೆಗಳು, ಮಾನಸಿಕ ಹೋರಾಟದ ಕತೆಗಳು ಆಗ ಇರಲಿಲ್ಲ. ಇದಕ್ಕೆ ಅಂದಿನ ಜನರ ಸರಳ ಜೀವನ ಸಂಸ್ಕಾರ ಕಾರಣವಾಗಿರಬಹುದು. ಅಲ್ಲದೆ ಈಗಿನಷ್ಟು ಓದು ಬೆಳೆದಿರಲಿಲ್ಲ. ವಿಮರ್ಶೆಯ ಹೊಸ-ದೃಷ್ಟಿ ಉದಿಸಿರಲಿಲ್ಲ. ಅಂದಿನ ಕತೆಗಳ ಮುಖ್ಯ ಅಂಶ, ಕತೆಗಳ ಜೀವಾಳ, ಕಥಾವಸ್ತುವನ್ನೇ ಅವಲಂಬಿಸಬೇಕಾಗು-ತ್ತಿತ್ತು. ಲೇಖಕನ ಶೈಲಿ-ತಂತ್ರಗಳಿಗಿಂತ ಘಟನಾಚಮತ್ಕೃ-ತಿಯೇ ಮುಖ್ಯವಸ್ತುವಾಗಿತ್ತು. ಇಂದು ಕಥನ ಕಲೆಗೆ ಮಹತ್ವವಿದ್ದರೆ, ಅಂದು ಕಥೆಗೇ ಮಹತ್ವವಿತ್ತು. ಆದ್ದರಿಂದ, ಆಗ ಕತೆಗಾರ ಹಿಂದೆ ಉಳಿದು ಕೃತಿಯೇ ಮುಂದೆ ಬಂದು ನಿಲ್ಲುತ್ತಿತ್ತು; ಕಥಾವಸ್ತುವೇ ಸರ್ವಸ್ವವಾಗಿತ್ತು. 'ಹೇಗೆ ನಿರೂಪಿಸಲಾಗಿದೆ?' ಎಂಬುದಕ್ಕಿಂತ 'ಏನನ್ನು ನಿರೂಪಿಸಲಾಗಿದೆ' ಎಂಬುದೇ ಮುಖ್ಯವಾಗಿತ್ತು.

---

# ಹೊಸಗನ್ನಡ ಕಥಾಸೃಷ್ಟಿ

## ೧. ಹೇಗೆ ಹುಟ್ಟಿ ಬೆಳೆಯಿತು ?

ಹೊಸಗನ್ನಡ ಕಥಾಸೃಷ್ಟಿ (೧) ಜನಪದ ಸಾಹಿತ್ಯವನ್ನು ಬರವಣಿಗೆಯಲ್ಲಿ ಇಳಿಸುವುದರಿಂದ, (೨) ಸಂಸ್ಕೃತ–ಪ್ರಾಕೃತಗಳ ಅನುವಾದದಿಂದ, (೩) ಇಂಗ್ಲೀಷ, ಬಂಗಾಳಿ, ಮರಾಠಿ ಮುಂತಾದ ಅನ್ಯಭಾಷೆಗಳ ಕೃತಿ ಭಾಷಾಂತರದಿಂದ, (೪) ಹಳಗನ್ನಡ ಕತೆಗಳ ಹೊಸ ಸೃಷ್ಟಿಯೇ ರೂಪ ತಾಳುವುದರಿಂದ ಹುಟ್ಟಿ ಬಂತು. ಈಗ ಬಲು ವಿಶಾಲವಾಗಿ ಹಬ್ಬಿದೆ. ಒಟ್ಟು ಸಾಹಿತ್ಯದಲ್ಲಿ ಕಥಾಸಾಹಿತ್ಯ ಬಹುಪಾಲು ಪಡೆದಿದೆ.

## ೧. ಜನಪದ ಕತೆಗಳು :

ಎಷ್ಟೋ ಜನಪದ ಕತೆಗಳು ಇದ್ದುದಿದ್ದಂತೆ ಇಲ್ಲವೆ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಆಧುನಿಕ ಲೇಖಕರಿಂದ ಬರವಣಿಗೆಯ ಭಾಗ್ಯ ಪಡೆದು ಸಾಹಿತ್ಯದಲ್ಲಿ ಸೇರಿಕೊಂಡಿವೆ. ಅವುಗಳನ್ನು ಗುರುತಿಸಬಹುದು. ಸ್ಥಳ ಮಹಾತ್ಮೆ, ವ್ಯಕ್ತಿಗಳ ಚಾರಿತ್ರಿಕ ಅಂಶ, ಅಲ್ಪ-ಸ್ವಲ್ಪ ಐತಿಹಾಸಿಕ ಹಿನ್ನೆಲೆ ಮುಂತಾದ ಪದರು ಒಡಿದು ಹೋದರೆ ಅವುಗಳ ಜಾಡನ್ನು ಕಂಡು ಹಿಡಿಯಬಹುದು. ಲೇಖಕರ ಸ್ವಂತ ಪ್ರತಿಭೆಯ ಬೆಳಕಿನಲ್ಲಿ

ಅವು ಕೆಲವು ಕಡೆಗೆ ತೀರ ಸ್ವಂತ ಕೃತಿಗಳಂತೆ ಮರೆಯುವುದೂ ಕಾಣುತ್ತದೆ. ಅಂಥ ಪ್ರಸಂಗಗಳಲ್ಲಿ ಅವು ಜನಪದ ಕತೆ-ಗಳೆಂದು ಹೇಳುವುದಕ್ಕೂ ಮನ ಹಿಂಜರಿಯುತ್ತದೆ. ಆದರೂ ಜನಪದವಾಸನೆ ಮಾತ್ರ ಆಗಾಗ ಮೂಗಿಗೆ ತಾಗದೆ ಹೋಗುವದಿಲ್ಲ. ಪಂಜೆ ಮಂಗೇಶರಾಯರ 'ಕೋಟಿ ಚೆನ್ನಯ' ಒಂದು ಜನಪದ ಕತೆ. ಮಾಸ್ತಿಯವರ, ಬೆಟಗೇರಿ ಕೃಷ್ಣ-ಶರ್ಮರ ಕೆಲವು ಕೃತಿಗಳಲ್ಲಿ ಈ ಜನಪದ ಶಕ್ತಿಯನ್ನು ಸಹಜವಾಗಿ ಗುರುತಿಸಬಹುದು.

**೨. ಸಂಸ್ಕೃತ-ಪ್ರಾಕೃತ ಅನುವಾದ ಕತೆಗಳು :**

ಬೃಹತ್ಕಥೆ, ಕಥಾಸರಿತ್ಸಾಗರ, ಪಂಚತಂತ್ರ ಮುಂತಾದ ಕೃತಿಗಳ ಭಾಷಾಂತರವು ಹಳಗನ್ನಡ ಸಾಹಿತ್ಯದಲ್ಲಿಯೇ ಹೇರಳವಾಗಿ ನಡೆದಿದೆ. ಹೊಸಗನ್ನಡದಲ್ಲಿಯೂ ಅಂಥ ಕಾರ್ಯ ಮುಂದುವರಿದಿದೆ. ವಸುಭಾಗ ಭಟ್ಟನ 'ಪಂಚತಂತ್ರ'ದಂತೆ ವಿಷ್ಣುಶರ್ಮನ ಪಂಚತಂತ್ರವೂ ಭಾಷಾಂತರವಾಗಿ ಬಂದಿದೆ. ಎ. ಆರ್. ಕೃಷ್ಣಶಾಸ್ತ್ರಿಗಳ 'ಕಥಾಮೃತ' ಬಂದಿದೆ. ವೇದ ಉಪನಿಷತ್ತಿನ ಕತಗಳ ಕನ್ನಡ ಅವತಾರವೂ ಆಗಿದೆ. ಪ್ರಸಿದ್ಧ ಸಂಸ್ಕೃತ ಪ್ರಾಕೃತ ಕೃತಿಗಳಲ್ಲಿ ಬಹಳಷ್ಟನ್ನು ಹೊಸಗನ್ನಡ ವಾಚಕಲೋಕ ಅರಿಯುವಂತೆ ಆಗಿದೆ.

**೩. ಇಂಗ್ಲೀಷ-ಬಂಗಾಳಿ-ಮರಾಠಿ ಅನುವಾದ ಕತೆಗಳು :**

ಇಂಗ್ಲೀಷ — ಬಂಗಾಳಿ — ಮರಾಠಿ ಭಾಷೆಗಳ ಭಾಷಾಂತರದಿಂದ ನಿಜವಾಗಿ ಹೊಸಗನ್ನಡದಲ್ಲಿ ಸಣ್ಣಕತೆಗಳ

ಸಂಪ್ರದಾಯ ಪ್ರಾರಂಭವಾಯಿತೆನ್ನಬಹುದು. ನಮ್ಮ ಆದ್ಯ ಸಣ್ಣ ಕತೆಗಳಲ್ಲಿ ಕೆಲವು ಇಂಗ್ಲೀಷಿನಿಂದ, ಬಂಗಾಳಿಯಿಂದ, ಮರಾಠಿಯಿಂದ ಕನ್ನಡಕ್ಕೆ ಅನುವಾದವಾಗಿ ಬಂದಿವೆ. ಪಂಜೆ ಮಂಗೇಶರಾಯರು ಇಂಗ್ಲೀಷ ಅನುವಾದಗಳಿಂದ, ಎಂ. ಎಸ್. ಕಾಮತರು ಬಂಗಾಳಿ ಅನುವಾದಗಳಿಂದ, ಕೆರೂರ ವಾಸುದೇವಾಚಾರ್ಯರು ಮರಾಠಿಯ 'ಸಂಪೂರ್ಣಗೋಷ್ಟ' ಗಳನ್ನು ಕನ್ನಡಕ್ಕೆ ಇಳಿಸುವದರಿಂದ ಹೊಸಗನ್ನಡ ಸಣ್ಣಕತೆಗಳ ಸೃಷ್ಟಿಗೆ ಬುನಾದಿಯನ್ನು ಹಾಕಿದರೆಂದು ಹೇಳಬಹುದು. ಇವರೆಲ್ಲರೂ ಸಮಕಾಲೀನ ವ್ಯಕ್ತಿಗಳಿದ್ದು ಸಾಧಾರಣ ಒಂದೇ ಕಾಲದಲ್ಲಿ ಸಾಹಿತ್ಯಸೇವೆ ಪ್ರಾರಂಭಿಸಿದರು. ಈ ಮೂರೂ ಲೇಖಕರು ಸ್ವತಂತ್ರ ಕೃತಿಗಳನ್ನೂ ರಚಿಸಿದ್ದಾರೆ; ಆದರೆ ಅವು ಅಷ್ಟು ಪ್ರಸಿದ್ಧವಾಗಿಲ್ಲ. ಪಂಜೆ–ಕೆರೂರ–ಕಾಮತ ಈ ತ್ರಿಮೂರ್ತಿಗಳು ಆಧುನಿಕ ಸಣ್ಣ ಕತೆಗಳ ಜನಕರೆಂದು ಕೆಲವರ ಅಭಿಪ್ರಾಯವಿದೆ.

## ೪. ಹಳಗನ್ನಡದ ಹೊಸ ರೂಪಾಂತರ ಕತೆಗಳು:

ಹಳಗನ್ನಡ ಕತೆಗಳ ಹೊಸ ರೂಪಾಂತರ ಕಾರ್ಯವೂ ಹೊಸಗನ್ನಡ ಸಾಹಿತ್ಯಸೃಷ್ಟಿಯಲ್ಲಿ ತನ್ನ ಪಾಲಿನ ಉತ್ತಮ ಸೇವೆಯನ್ನು ಸಲ್ಲಿಸಿದೆ ಎನ್ನಬಹುದು. ಹಿಂದಿನದನ್ನು ತಿಳಿಯದ ಹೊರತು ಮುಂದೆ ಹೆಜ್ಜೆ ಹಾಕುವದು ಸರಿಯಲ್ಲ. ಹಿಂದಿನದನ್ನು ತಿಳಿಯಲು ಮಾಡಿದ ಯತ್ನವೇ ಎಷ್ಟೋ ಸಾರೆ ಹೊಸಸೃಷ್ಟಿಗೆ ಪ್ರೇರಣೆಯನ್ನು ಒದಗಿಸುತ್ತದೆ. ಹಳಗನ್ನಡ-

ದಲ್ಲಿರುವ ಉತ್ತಮ ಕತೆಗಳನ್ನು ಜಿ. ಪಿ. ರಾಜರತ್ನಂ, ಎಲ್. ಗುಂಡಪ್ಪ, ತ. ಸು. ಶಾಮರಾಯ, ಮ. ಪ್ರ. ಪೂಜಾರ, ಬಿ. ಶಂಕರಭಟ್ಟ ಮೊದಲಾದವರು ಹೊಸಗನ್ನಡಕ್ಕೆ ಹೊಸೆದು ಕೊಟ್ಟು ತುಂಬ ಉಪಕಾರ ಮಾಡಿದ್ದಾರೆ. ವಡ್ಡಾರಾಧನೆ, ಪಂಚತಂತ್ರ, ಧರ್ಮಾಮೃತ, ಭವಾವಳಿ ಕತೆಗಳು, ಯಶೋಧರ ಚರಿತೆ ಮುಂತಾದ ಹೊಸ ರೂಪಗಳು ಬಂದಿವೆ.

## ೫. ಸ್ವತಂತ್ರ ಕತೆಗಳು:

ಹೊಸಗನ್ನಡ ಕಥಾಸೃಷ್ಟಿಯಲ್ಲಿ ಅತ್ಯಂತ ಮಹತ್ವದ ಅಂಶವೆಂದರೆ ಸ್ವತಂತ್ರ ಕೃತಿ ಸಮೂಹ. ಯಾವ ಕಾಲಕ್ಕಾದರೂ ಭಾಷಾಂತರ, ಅನುವಾದ, ರೂಪಾಂತರಗಳಿಗೆ ದ್ವಿತೀಯ ಸ್ಥಾನ. ನಾಡಿನ ಪ್ರಗತಿಗೆ ಸ್ವತಂತ್ರ ಕೃತಿಗಳ ಸೇವೆ ಅಮೌಲ್ಯವಾದುದು. ಸ್ವತಂತ್ರ ಕೃತಿ ಸಮೂಹಕ್ಕೆ ಪ್ರಥಮ ಪಟ್ಟ ದೊರೆಯುವದು ಅದರ ಮೂಲಭೂತ ಹಕ್ಕು. ಅದೇ ಆ ನಾಡಿನ ಶಕ್ತಿಯ ಸಂಕೇತ. ಅದೇ ಆ ನಾಡಿನ ಸಂಸ್ಕೃತಿಯ ವೈಭವ. ಮೇಲಿನ ಮೊದಲಿನ ನಾಲ್ಕು ಅಂಶಗಳು ಈ ಐದನೆಯ ಅಂಶದ ಶಕ್ತಿ ಬೆಳೆದು ಬಾಳುವದಕ್ಕೆ ಗೊಬ್ಬರವಾಗಿವೆ.

"ಈಗ ಕನ್ನಡದಲ್ಲಿ ಬಂದಿರುವ ಸಣ್ಣ ಕತೆಗಳಲ್ಲಿ ಅತ್ಯುತ್ತಮವಾದುವು ಭಾರತದ ಇತರ ಭಾಷೆಗಳ ಉತ್ತಮ ಕತೆಗಳಿಗೂ, ಅನೇಕ ಪಾಶ್ಚಾತ್ಯ ಉತ್ತಮ ಕತೆಗಳಿಗೂ ಯಾವ ವಿಧದಲ್ಲಿಯೂ ಕಡಿಮೆ ಅಲ್ಲ". –ಗೊ. ರಾ. ಅಯ್ಯಂಗಾರ. ಹೊಸಗನ್ನಡ ಸ್ವತಂತ್ರ ಸಣ್ಣ ಕಥೆಗಳು ಕನ್ನಡಿಗರಿಗೆ ಹೆಮ್ಮೆ

ಹುಟ್ಟಿಸುವಂತೆ ಬೆಳೆದು ಬರುತ್ತಿರುವುದು ಒಳ್ಳೆಯ ಲಕ್ಷಣವೇ ಸರಿ. ಶ್ರೀನಿವಾಸರಿಂದ ಮೊದಲು ಮಾಡಿಕೊಂಡು ಇಂದಿನ ಅತ್ಯಾಧುನಿಕ ಕಾಲೇಜ ತರುಣನವರೆಗೆ ಅಸಂಖ್ಯಾತ ಕತೆಗಾರರು ತಮ್ಮ ಸೇವೆಯಿಂದ ಈ ಕ್ಷೇತ್ರವನ್ನು ಬೆಳಗಿದ್ದಾರೆ; ಬೆಳೆಸಿದ್ದಾರೆ.

ಸಣ್ಣಕತೆಗಳು, ದೊಡ್ಡಕತೆಗಳು, ಹನಿಗತೆಗಳು, ಲಘು ಕತೆಗಳು ಮುಂತಾದ ಹಲವಾರು ಮಾದರಿಯ ಕತೆಗಳು ಹುಟ್ಟಿವೆ. ಚಿತ್ರಗಳು, ರಸನಿಮಿಷಗಳು, ವಿಷನಿಮಿಷಗಳು, ಹರಟೆಗಳು, ಗೀಚುಗೆರೆಗಳು ಕಥಾಸೃಷ್ಟಿಗೆ ಹತ್ತಿರ ಹತ್ತಿರವೇ ಹಾಯ್ದು ಸುತ್ತಮುತ್ತಲು ಸುಳಿದಾಡಿವೆ. ಹಳೆಯ ಕತೆಗಳ ಹಾವಳಿಯೂ ಆಗಾಗ ಎದ್ದು ಗದ್ದಲವೆಬ್ಬಿಸುತ್ತದೆ. ಆದ್ದರಿಂದ 'ಸಣ್ಣಕತೆಗಳು' ಎಂಬ ಸ್ವತಂತ್ರ ತಲೆಕಟ್ಟಿನ ಕೆಳಗೆ ಅದರ ಇತಿಹಾಸ, ಲಕ್ಷಣ, ನೆಲೆಬೆಲೆ ಮುಂತಾದ ವಿಷಯಗಳನ್ನು ಕುರಿತು ಯೋಚಿಸುವದು ಯೋಗ್ಯವಾದುದು.

## ೨. ಹೊಸಗನ್ನಡ ಕಥಾಸೃಷ್ಟಿಯಲ್ಲಿ ಸಣ್ಣಕತೆಗಳು :

### (i) ಸಣ್ಣಕತೆ ಅಂದರೇನು ?

**'ಕತೆಯ ವಸ್ತು, ಅಲ್ಲಿನ ಪಾತ್ರರಚನೆ, ಅದರಲ್ಲಿನ ಆವರಣ ಎಲ್ಲವೂ ಒಂದೇ ಒಂದು ಗುರಿಯನ್ನು ಮುಟ್ಟು ವಂತೆ ಪರಿಪೋಷಕವಾಗಿದ್ದು ಓದುಗನಲ್ಲಿ ಒಂದೇ ಒಂದು ಪರಿಣಾಮವನ್ನು ಮೂಡಿಸುವಂತಿದ್ದರೆ ಅದು ಸಣ್ಣಕತೆ ಎನ್ನಿಸಿಕೊಳ್ಳುವುದು'** ಎಂದು ಕೆ. ಗೋಪಾಲಕೃಷ್ಣ

**ರಾಯರು** ಕತೆಯ ವ್ಯಾಖ್ಯೆಯನ್ನು ಹೇಳಿದ್ದಾರೆ. ಸಣ್ಣಕತೆ ಗದ್ಯದ ಸಣ್ಣ ಬರವಣಿಗೆ ಎಂದು ತಿಳಿಯುವುದು ತಪ್ಪು; ಆದರ ಗಣ್ಯತೆಯನ್ನು ಗಮನಿಸದೆ ಬರೆಯಲು ತೊಡಗುವುದು ಸರಿಯಲ್ಲ. ಕತೆಗಾರನ ಮೇಲಿನ ಹೊಣೆ ಹೆಚ್ಚಿನದು. ಅವನಲ್ಲಿ ವಿಚಾರಜ್ಞಾನ ಪಕ್ವವಾಗಿರಬೇಕು. ಆದುದರಿಂದಲೇ **'ಶ್ರೀ' ಯವರು** 'ಸಣ್ಣಕತೆ ಬರೆಯುವುದು ಬಹಳ ಕಷ್ಟದ ಕೆಲಸ. ಕಿರಿದರಲ್ಲಿ ಹಿರಿದಾದ ಭಾವ ಜ್ಞಾನ ಅನುಭವಗಳನ್ನು ತುಂಬಿ ಜೀವನಕ್ಕೆ ಬೆಳಕು ಬೀರುವುದು ಅದರ ವೈಶಿಷ್ಟ್ಯ' ಎಂದರು.

ಸಾಧಾರಣವಾಗಿ ಮೇಲುನೋಟಕ್ಕೆ ಸಣ್ಣಕತೆಯ ಪ್ರಕೃತಿ ಸಣ್ಣದೆಂದು ತೋರುವುದು. ಆದರೂ ಅದೊಂದು ರಸಬಿಂದು ಎಂದು ಹೇಳಿದರೊಬ್ಬರು. ಅಂತೆಯೇ ಶ್ರೀ **ಬೇಂದ್ರೆ** ಯವರು ಒಂದೆಡೆಗೆ ಕತೆಯೊಂದು ಭಾವಗೀತೆಯಿದ್ದಂತೆ, ಎಂದರು. ಕತೆಯ ಪರಿಣಾಮ ಅಷ್ಟು ತೀವ್ರ, ಅಷ್ಟು ಹರಿತ. ಅದು ತೆರೆದಿಡುವ ಸತ್ಯ ಅದ್ಭುತವಾದರೂ ಬಳಸುವ ಮಾತು ತೀರ ಸ್ವಲ್ಪ. ಆದುದರಿಂದ ಕಥಾವಸ್ತುವಿಗಿಂತ ನಿರೂಪಣೆಗೆ ಮಹತ್ವ ಹೆಚ್ಚು. 'ಸ್ವಾಭಾವಿಕತೆಗೆ ಭಂಗ ಬರಬಾರದು ಕೃತ ಕತೆಯ ನೆಳಲು ದೂರದಿಂದ ಬಿದ್ದರೂ ಕೆಟ್ಟೀತು ಕತೆಯ ಹದ–' ಎನ್ನುತ್ತಾರೆ. **'ಸಣ್ಣ ಕತೆ ಅರೆಚಣದಲ್ಲಿ ರಚಿಸಿದ ತಾಜ ನುಹಾಲು'** ಎನ್ನುತ್ತಾರೆ **ಅ. ನ. ಕೃ.** ಅವರು.

**ಎಸ್. ವ್ಹಿ. ರಂಗಣ್ಣನವರು 'ಸಣ್ಣಕತೆ ನಿಸ್ಸಂದೇಹ ವಾಗಿ ಲಂಗ ಉಟ್ಟ ದೊರೆಸಾನಿ'** — ಎಂದು ಅಭಿಪ್ರಾಯ ಪಟ್ಟಿದ್ದಾರೆ.

ತನ್ನ ಸುತ್ತುಮುತ್ತಲಿನ ವಾತಾವರಣದಲ್ಲಿ ತಾನು ಕಂಡ ಒಂದು ದೃಶ್ಯ, ಒಂದು ಮಾರ್ಮಿಕ ಮಾತು, ತಾನು ತಿಳಿದ ಸತ್ಯ, ಅನುಭವಿಸಿದ ಅನುಭವ, ತಾನು ಕೇಳಿದ ಪ್ರಸಂಗ ಕತೆಗೆ ವಸ್ತುವಾಗಿ ನಿಲ್ಲಬಹುದು. ಶಕ್ಯವಿದ್ದಷ್ಟು ಕಡಿಮೆ ಪಾತ್ರಗಳನ್ನು ತೆಗೆದುಕೊಂಡು ಹೆಚ್ಚು ಪರಿಣಾಮವಾಗುವಂತೆ ಹೇಳಬೇಕು.

ಸಾಮಾನ್ಯವಾಗಿ ಸಣ್ಣ ಕತೆಯು ಸಾಹಿತ್ಯರೂಪ ಕನ್ನಡದಲ್ಲಿ ಇಂಗ್ಲೀಷ ಸಾಹಿತ್ಯದ ಅಭ್ಯಾಸದ ಪರಿಣಾಮವಾಗಿ ಬಂತು— ಎಂದು ನಂಬಿಗೆ ಇದೆ. ಇದನ್ನು ಕೆಲವರು ಪೂರ್ಣ ಒಪ್ಪುವದಿಲ್ಲ.

**"ಸಣ್ಣ ಕತೆಗಳು ಇಂಗ್ಲೀಷ ಭಾಷೆಯ ಅನುಕರಣ- ವಲ್ಲ; ಅನುಕೂಲತೆ"—ದ. ರಾ. ಬೇಂದ್ರೆ.**

"ಇಂದಿನ ಸಣ್ಣಕತೆಗಳಲ್ಲಿ ಉದ್ದೇಶ, ವಸ್ತು, ಭಾವಗಳಲ್ಲಿ ನಾವೀನ್ಯವಿದೆ. ಪ್ರಕಾರ, ನಿರೂಪಣೆಯಲ್ಲಿ ಹೊಸತನವಿದೆ. ಈ ಹೊಸತು ಕನ್ನಡ ಸಾಹಿತ್ಯಕ್ಕೆ ಸ್ವಾಭಾವಿಕವಾಗಿ ಬಂದಿದೆ"– ಎಂದು **ಕೃಷ್ಣಮೂರ್ತಿ ಪುರಾಣಿಕರು** ಅಭಿಪ್ರಾಯ ಪಡುತ್ತಾರೆ.

ಕನ್ನಡ ಸಣ್ಣಕತೆಗಳು ಇಂಗ್ಲೀಷಿನ ಕೇವಲ ಅನುಕರಣ- ವಲ್ಲ; ಆದರೂ ಇಂಗ್ಲೀಷ ಭಾಷೆ ಕನ್ನಡ ಸಣ್ಣಕತೆಗಳು ಬೆಳೆಯಲು ಅನುಕೂಲತೆಯನ್ನು ಒದಗಿಸಿದೆ ಎಂಬುದರಲ್ಲಿ

ಸಂದೇಹವಿಲ್ಲ. ಕಥಾವಸ್ತು ನಮ್ಮದಾದರೂ ಹೇಳುವ ರೀತಿಯನ್ನು ನಾವು ಇಂಗ್ಲೀಷ ಸಾಹಿತ್ಯದ ವ್ಯಾಸಂಗದಿಂದ ಕಲಿತು ಕೊಂಡೆವು.

"ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಣ್ಣಕತೆ ಎಂಬುದು ಇಂಗ್ಲೀಷಿನ 'short story' ಎಂಬುದಕ್ಕೆ ಪ್ರತಿಯಾಗಿ ಉಪಯೋಗಿಸುತ್ತಿರುವ ಪದ. ಈ ಸಂದರ್ಭದಲ್ಲಿ ಅದಕ್ಕೆ ಒಂದು ವಿಶಿಷ್ಟವಾದ ಅರ್ಥವಿದೆ. ಈ ಅರ್ಥದ ಪ್ರಕಾರ ಸಣ್ಣಕತೆಯೂ ಒಂದು ಕಲಾಕೃತಿ. ಅದರಲ್ಲಿ ಒಂದು ವಿಧವಾದ ಸಂಪೂರ್ಣತೆ, ಐಕ್ಯ, ಕಮನೀಯತೆ ಇರುತ್ತವೆ. ಸಣ್ಣಕತೆ ನಮಗೆ ಇಂಗ್ಲೀಷಿನಿಂದ ಬಂದಿತೆಂಬುದರಲ್ಲಿ ಸಂದೇಹವಿಲ್ಲ. ಅವು ನಮ್ಮಲ್ಲಿಯೇ ಹುಟ್ಟಿ ನಮ್ಮಲ್ಲಿಯೇ ಬೆಳೆದವು ಎಂದು ಹೇಳಬಯಸುವ ಕೆಲವರು ನಯಸೇನನ ಕತೆಗಳನ್ನು ಬೆರಳಿಟ್ಟು ತೋರಿಸುತ್ತಾರೆ. ಈ ಕತೆಗಳು ಚಿಕ್ಕವಾಗಿವೆ ಎಂಬರ್ಥದಲ್ಲಿ ಮಾತ್ರ ಇವು ಸಣ್ಣಕತೆಗಳು. ಆಧುನಿಕ ಸಾಹಿತ್ಯದ ಸಣ್ಣ ಕತೆಗಳಿಗೂ ಇವಕ್ಕೂ ಯಾವ ಸಾಮ್ಯವೂ ಇಲ್ಲ. ಇವೆರಡರ ರೀತಿ ಬೇರೆ ಬೇರೆ"—ಎನ್ನುತ್ತಾರೆ **ಜಿ. ವೆಂಕಟಸುಬ್ಬಯ್ಯನವರು.**

ಇದೇ ವಿಷಯವನ್ನು ಕುರಿತು **ಬೆಟಗೇರಿ ಕೃಷ್ಣ ಶರ್ಮರು** 'ಜನಪದ ಜೀವನ' ಗ್ರಂಥದ ಮೊದಲನುಡಿಯಲ್ಲಿ ಚರ್ಚೆ ಮಾಡುತ್ತ ಹೀಗೆ ಹೇಳಿದ್ದಾರೆ:

"ಕನ್ನಡಿಗರಿಗೆ ಕಥಾಸಾಹಿತ್ಯ ಹೊಸದಲ್ಲವಾದರೂ ಆಧುನಿಕ ಸಣ್ಣ ಕತೆಗಳ ಸಾಹಿತ್ಯತಂತ್ರದ ಪ್ರಜ್ಞೆ ಹೊಸ

ದಾಗಿಯೇ ಮೂಡಿದುದು. ಈಗ ೩೫-೪೦ ವರ್ಷಗಳ ಹಿಂದೆ 'ಸಣ್ಣ ಕತೆ' ಎಂಬ ಮಾತು ಬಳಕೆಯಲ್ಲಿ ಇದ್ದಿತಾದರೂ ಅದು ಇದ್ದುದು ಕತೆಯ ಕಿರಿಯಾಕಾರವನ್ನು ಮಾತ್ರ ಸೂಚಿಸು-ವದಕ್ಕಾಗಿ. ಇಂದು ಸಣ್ಣ ಕತೆ ಎಂಬ ಪದವು ಕೆಲವೊಂದು ಸಾಹಿತ್ಯ ಲಕ್ಷಣವಿಶೇಷವನ್ನು ಕೂಡಿಕೊಂಡುದಾಗಿ ನಮ್ಮ ಕಣ್ಣೆದುರು ನಿಲ್ಲುವಂತೆ, ಅಂದಿನವರ ಕಣ್ಣೆದುರು ನಿಲ್ಲು ತ್ತಿರಲಿಲ್ಲ."

**ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ** ಅವರು ಈ ಮಾತನ್ನು ಮತ್ತಿಷ್ಟು ಸ್ಪಷ್ಟಪಡಿಸಿದ್ದಾರೆ. "ಯಾವುದನ್ನು ನಾವು ಇಂದು ಕಲೆಯ ಮುದ್ರೆಯನ್ನೊಳಗೊಂಡ ಸಣ್ಣಕತೆ (short story) ಎನ್ನುತ್ತೇವೆಯೋ ಅದು ಸಣ್ಣ ಕತೆಯ ರೂಪದಲ್ಲಿ ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ದೊರೆಯುತ್ತಿಲ್ಲ. ಸಣ್ಣ ಕತೆಗೆ ಕೆಲವು ಲಕ್ಷಣಗಳಿರಬೇಕೆಂದು ನಾವು ಹೇಳುತ್ತೇವೆ. ಪಂಚತಂತ್ರ, ಹಿತೋಪದೇಶ, ಬೃಹತ್ಕಥಾಮಂಜರಿ ಇವು ಆ ದೃಷ್ಟಿಯಿಂದ ಸಣ್ಣಕತೆಗಳಲ್ಲ; ಬರಿಯ ಕತೆಗಳು."

### (ii) 'ಸಣ್ಣಕತೆ' ಎಲ್ಲಿಂದ, ಹೇಗೆ ಬಂತು?

ಸುಮಾರು ನೂರು ವರ್ಷಗಳ ಹಿಂದೆ **ಎಡ್ಗರ್ ಅಲನ್ ಪೋ** ಎಂಬಾತನಿಂದ ಅಮೇರಿಕಾ ದೇಶದಲ್ಲಿ 'ಸಣ್ಣ ಕತೆ'ಯ ಈ ಸಾಹಿತ್ಯರೂಪ ಜನ್ಮತಾಳಿತು. ಪಾಶ್ಚಾತ್ಯ ದೇಶಗಳಲ್ಲೆಲ್ಲ ಅದು ಬೇಗನೆ ಪ್ರಚಾರವಾಯಿತು. ಫ್ರಾನ್ಸ,

ಇಂಗ್ಲೆಂಡ, ರಶಿಯಾ, ಜರ್ಮನಿ, ನಾರ್ವೆ ದೇಶಗಳಲ್ಲಿ ಅದು ಅತ್ಯಂತ ಪ್ರಖ್ಯಾತಿಯನ್ನು ಪಡೆಯಿತು. ವಿಜ್ಞಾನದ ಪ್ರಗತಿ ಯಿಂದ ಜಗತ್ತಿನ ಜೀವನವೇ ಪಲ್ಲಟವಾಯಿತು. ಅಚ್ಚಿನ ಸೌಕರ್ಯದಿಂದ ವಾಚನಾಭಿರುಚಿ ಹೆಚ್ಚಿತು. ಶೀಘ್ರಗತಿಯ ಜೀವನ, ಶಿಕ್ಷಣ ಪ್ರಸಾರದ ಪರಿಣಾಮ, ಸರ್ವವಿಧದಿಂದ ಪ್ರಗತಿಯನ್ನು ಪಡೆಯುತ್ತಿರುವ ಆಧುನಿಕ ನಾಗರಿಕತೆ, ಯಂತ್ರಗಳೊಡನೆ ಯಂತ್ರವಾಗಿ ಬೆರೆತ ಮಾನವನ ಉದ್ಯೋಗ-ಪ್ರಿಯತೆ—ಇವುಗಳ ಪರಿಣಾಮ ಸಾಹಿತ್ಯದ ಮೇಲೆಯೂ ಕಾಣಿಸಿಕೊಂಡಿತು. ಅಲ್ಪವೇಳೆಯಲ್ಲಿ ಹೆಚ್ಚು ಸಂತೋಷವನ್ನು ಒದಗಿಸುವ ಸಾಹಿತ್ಯ ಪ್ರಕಾರಗಳು ಬೆಳೆದವು. ಅವುಗಳಲ್ಲಿ **'ಸಣ್ಣ ಕತೆ'**ಗೆ ಅದರ ಸೌಲಭ್ಯದಿಂದಾಗಿ ಸಾರ್ವಜನಿಕ ಮರ್ಯಾದೆ ಅತಿಯಾಗಿ ದೊರೆಯತೊಡಗಿತು. ಮೊತ್ತ-ದಲ್ಲಿಯೂ, ಸತ್ವದಲ್ಲಿಯೂ, ವೈವಿಧ್ಯ-ವಿಸ್ತಾರಗಳಲ್ಲಿಯೂ, ಸೂಕ್ಷ್ಮತೆ-ತೀಕ್ಷ್ಣತೆಗಳಲ್ಲಿಯೂ ಸಣ್ಣಕತೆಗಳಲ್ಲಿ ಸಾವಿರಗಟ್ಟಲೆ, ಲಕ್ಷಗಟ್ಟಲೆ, ಜಗತ್ತಿನ ಆದ್ಯಂತವಾಗಿ, ಪ್ರಯೋಗಗಳು ನಡೆದವು; ಇಂದಿಗೂ ನಿತ್ಯವೂ ಅಂಥ ಪ್ರಯೋಗಗಳು ನಡೆಯುತ್ತಲೇ ಇವೆ.

ಇಂಗ್ಲೀಷ ಸಾಹಿತ್ಯದ ಅಭ್ಯಾಸದ ಪರಿಣಾಮವಾಗಿಯೇ ಭಾರತದ ಪ್ರಾದೇಶಿಕ ಭಾಷೆಗಳಲ್ಲಿ ಒಂದು ಹೊಸ ಕ್ರಾಂತಿ ತಲೆದೋರಿತು. ಹಲವಾರು ಹೊಸ ರೂಪಗಳ ಜೊತೆಗೆ **'ಸಣ್ಣ ಕತೆ'** ಯೂ ಭಾರತ ದೇಶಕ್ಕೆ ಬಂದು ಮೆಲ್ಲನೆ ಎಲ್ಲ ಕಡೆಗೆ ಕಾಲು ಚಾಚಿತು.

**ಬಂಗಾಲದಲ್ಲಿ 'ಸಣ್ಣ ಕತೆ'**ಯ ಮೊದಲ ಪ್ರಯೋಗಗಳು ನಡೆದವು. **ರವೀಂದ್ರನಾಥ ಠಾಕೂರರಂಥವರು** 'ಸಣ್ಣ ಕತೆ'ಯ ಸೃಷ್ಟಿಗೆ ಕೈಹಾಕಿ ಅದರ ಕೀರ್ತಿಯನ್ನು ಹೆಚ್ಚಿಸಿದರು. ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಸುಮಾರು ಇದೇ ಸಮಯ, ಇಲ್ಲವೆ ಸ್ವಲ್ಪ ತಡಮಾಡಿ, ಸಣ್ಣ ಕತೆಯ ಪ್ರಯೋಗಗಳು ಪ್ರಾರಂಭವಾದವು. ಆದರೆ, ಠಾಕೂರರಂಥ ವ್ಯಕ್ತಿತ್ವವುಳ್ಳ ಕತೆಗಾರರ ಅಭಾವದಿಂದ ಆಗ ಸೃಷ್ಟಿಯಾದ ಆಯಾ ಪ್ರಾಂತೀಯ ಭಾಷೆಗಳ ಸಣ್ಣ ಕತೆಗಳಿಗೆ ಅಷ್ಟು ಸ್ಪಷ್ಟವಾದ ಮರ್ಯಾದೆ ದೊರೆಯದೆ ಹೋಯಿತು. ಕರ್ನಾಟಕವು ಬಹು ಬೇಗ ಸಣ್ಣ ಕತೆಯ ಪ್ರಭಾವವನ್ನು ಗುರುತಿಸಿಕೊಂಡಿತು. 'ಧೀರರಾದ ಸಾಹಸಿಗಳು ಮುಂದೆ ಬಂದು ಈ ಸಾಹಿತ್ಯದ ಮೂಲಕ ಜನರು ಹೃದಯದ ತಂತಿಗಳನ್ನು ಮಿಡಿಯ-ತೊಡಗಿದರು.'

### (iii) ಕನ್ನಡದ ಪ್ರಥಮ ಸಣ್ಣ ಕತೆಗಾರರು

ಕನ್ನಡದ ಮೊಟ್ಟಮೊದಲ ಸಣ್ಣ ಕತೆಗಾರರೆಂದು (೧) ಶ್ರೀ ಕೆರೂರು ವಾಸುದೇವಾಚಾರ್ಯ, (೨) ಶ್ರೀ ಪಂಜೆ ಮಂಗೇಶರಾಯ, (೩) ಶ್ರೀ ಎಂ. ಎನ್. ಕಾಮತ ಅವರ ಹೆಸರುಗಳನ್ನು ಒಮ್ಮೆಲೆ ಒಟ್ಟುಗೂಡಿಸಿ ಹೇಳಲಾಗುತ್ತದೆ. ಇವರು ಭಾಷಾಂತರ ಕೃತಿಗಳ ಜೊತೆಗೆ ಕೆಲವು ಸ್ವತಂತ್ರ ಕೃತಿಗಳನ್ನು ರಚಿಸಿದರೂ, ಇವರ ಕೃತಿಗಳು ಅಷ್ಟೊಂದು ಜನರ ಗಮನವನ್ನು ಸೆಳೆಯಲಿಲ್ಲ. "ಸಣ್ಣ ಕತೆಗಳ ಲಕ್ಷಣ ವೈಶಿಷ್ಟ್ಯ

ವನ್ನು ಸೂಕ್ಷ್ಮವಾಗಿ ಅರಿತುಕೊಂಡು, ಆಧುನಿಕ ಸಾಹಿತ್ಯ ನಿರ್ಮಿತಿಯಲ್ಲಿ ಆ ಸಾಹಿತ್ಯ ಜಾತಿಗೂ ಒಂದು ಮಹತ್ವದ ಸ್ಥಾನವನ್ನು ಕಲ್ಪಿಸಿಕೊಡಬೇಕೆಂಬ ಪ್ರಜ್ಞೆಯಿಂದಲೇ ಕನ್ನಡ-ದಲ್ಲಿ 'ಸಣ್ಣಕತೆ'ಗಳನ್ನು ಬರೆಯಲು ಪ್ರಾರಂಭಿಸಿದವರು ಹಿರಿಯರಾದ ಶ್ರೀಮಾನ್ **ಮಾಸ್ತಿ ವೆಂಕಟೇಶ ಅಯ್ಯಂಗಾರರು.** ಎಂತಲೇ ಇವರನ್ನು 'ಸಣ್ಣಕತೆಯ ಜನಕರು' ಎಂದು ನಾಡಿಗರು ಹೇಳುತ್ತಿರುವುದು. ಚಾರಿತ್ರಿಕ ನಿಷ್ಪಕ್ಷಪಾತ ಬುದ್ಧಿಗೆ **ಶ್ರೀ ಮಾಸ್ತಿಯವರು 'ಸಣ್ಣಕತೆಯ ಜನಕರು'** ಎಂದು ಹೇಳುವ ಮಾತು ಅಸತ್ಯವಾಗಿ ತೋರುವ ಕಾರಣವೇನೂ ಇಲ್ಲ" **-ಬೆಟಗೇರಿ ಕೃಷ್ಣಶರ್ಮ.**

**"ಮೊಟ್ಟಮೊದಲು ಸಣ್ಣಕತೆಗಳನ್ನು ಬರೆದವರು ಅವರೇ ಹೌದೋ ಅಲ್ಲವೋ. ಆದರೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಒಬ್ಬನೇ ಲೇಖಕ ರಚಿಸಿದ ಸಣ್ಣಕತೆಗಳ ಸಂಖ್ಯೆ, ಬೆಲೆ, ಪ್ರಭಾವ—ಈ ಮೂರು ದೃಷ್ಟಿಗಳಿಂದ ಅವರು ಕನ್ನಡದಲ್ಲಿ ಸಣ್ಣಕತೆಗಳ ತಂದೆ ಎನ್ನುವುದರಲ್ಲಿ ಸಂದೇಹವಿಲ್ಲ"—ಎಲ್. ಎಸ್. ಶೇಷಗಿರಿರಾವ್.**

### ೩) ಕನ್ನಡ ಸಣ್ಣಕತೆಗಳ ಸಾಹಿತ್ಯ ಚರಿತ್ರೆ :

ಏನೇ ಇರಲಿ, ಸಣ್ಣಕತೆಗಳ ಸಾಹಿತ್ಯ ಚರಿತ್ರೆಯಲ್ಲಿ ಮಾಸ್ತಿಯವರಿಂದ ಸ್ಪಷ್ಟವಾದ ಮಾರ್ಗ ರಚನೆಯಾಯಿತು. ಆ ಮುಂದೆ ಆ ಮಾರ್ಗಕ್ರಮಣ ಮಾಡಿದವರು ಅಸಂಖ್ಯ.

ಸಣ್ಣಕತೆಗಳ ಬೆಳವಣಿಗೆಯನ್ನು ಕಣ್ಣಮುಂದೆ ಇಟ್ಟು-ಕೊಂಡು ಸಣ್ಣಕತೆಗಳ ಸಾಹಿತ್ಯ ಚರಿತ್ರೆಯಲ್ಲಿ ನಾಲ್ಕು ಘಟ್ಟಗಳನ್ನು ರಚಿಸಬಹುದು :

(೧) ಸು. ೧೯೦೦ ರಿಂದ ೧೯೩೩ (ಪ್ರಾರಂಭಕಾಲ)

(೨) ೧೯೩೩ ರಿಂದ ೧೯೪೩ (ಚಿನ್ನದ ಕಾಲ)

(೩) ೧೯೪೩ ರಿಂದ ೧೯೫೬ (ಪ್ರಗತಿಶೀಲ ಕಾಲ)

(೪) ೧೯೫೬ ರಿಂದ ಈಚೆಗೆ (ನವ್ಯಕಾಲ).

**(೧) ಸು. ೧೯೦೦ ರಿಂದ ೧೯೩೩ :** (ಪ್ರಾರಂಭ ಕಾಲ)

೧೯೧೯ ರಲ್ಲಿ 'ಪ್ರಬುದ್ಧ ಕರ್ನಾಟಕ' ಪತ್ರಿಕೆ ಪ್ರಾರಂಭ-ವಾಯಿತು. ಅದರ ಮೂರನೇ ವರ್ಷದ ೪ ನೇ ಸಂಚಿಕೆಯಲ್ಲಿ (III–4) ಶ್ರೀನಿವಾಸರ (ಮಾಸ್ತಿ ವೆಂಕಟೇಶ ಅಯ್ಯಂಗಾರರ) 'ಬಾದಷಹನ ದಂಡನೆ' ಎಂಬ ಕತೆ ಪ್ರಕಟವಾಯಿತು. 'ಪ್ರಬುದ್ಧ ಕರ್ನಾಟಕ'ವು ೩ ನೇ ವರ್ಷದ ೨ ನೇ ಸಂಚಿಕೆಯಲ್ಲಿ 'ಶಾರದೆ' ಎಂಬ ಬೇರೊಬ್ಬರ ಒಂದು ಕತೆಯನ್ನು ಮೊದಲ ಸಲ ಪ್ರಕಟಮಾಡಿತ್ತು. ಅಲ್ಲದೆ ಶ್ರೀನಿವಾಸರ ಒಂದು ಸಣ್ಣ ಕತೆ 'ರಂಗಪ್ಪನ ಮದುವೆ' ಪ್ರಬುದ್ಧ ಕರ್ನಾಟಕವು ಹುಟ್ಟುವುದಕ್ಕಿಂತ ಮೊದಲೇ 'ಮಧುರವಾಣಿ' ಪತ್ರಿಕೆಯಲ್ಲಿ ಅಚ್ಚಾಗಿತ್ತು. ಅದಕ್ಕಿಂತ ಮೊದಲೇ 'ಸಚಿತ್ರ ಭಾರತ', 'ವಾಗ್ಭೂಷಣ' 'ಸದ್ಬೋಧ ಚಂದ್ರಿಕೆ' 'ಸುವಾಸಿನಿ,' 'ಶ್ರೀಕೃಷ್ಣ ಸೂಕ್ತಿ' ಮುಂತಾದ ಪತ್ರಿಕೆಗಳಲ್ಲಿ ಕತೆಗಳು ಅಚ್ಚಾಗಿ

ಬರುತ್ತಿದ್ದವು. ಕೆರೂರ ಅವರ ಕತೆಗಳು 'ಸಚಿತ್ರ ಭಾರತ'ದಲ್ಲಿ ಬಂದಿವೆ. ಯಾವ ಇಸ್ವಿಯಿಂದ ಕನ್ನಡ ಸಣ್ಣ ಕಥಾಸಾಹಿತ್ಯ ಪ್ರಾರಂಭವಾಯಿತು ? ಎಂಬುದನ್ನು ನಿಶ್ಚಯವಾಗಿ ಹೇಳುವುದು ಕಷ್ಟವಾದರೂ ಸು. ೧೯೦೦ ರಲ್ಲಿ ಆಗಿರಬಹುದೆಂದು ಸಾಮಾನ್ಯವಾಗಿ ತಿಳಿಯಬಹುದು. ೧೯೨೦ ರಿಂದ ಮುಂದೆ ಕನ್ನಡದಲ್ಲಿ ಸಣ್ಣಕತೆಗಳು ಸ್ವತಂತ್ರವಾಗಿ ಪ್ರಕಟವಾಗತೊಡಗಿದವು. ಮಾಸ್ತಿಯವರ ಮೊದಲ ಸಂಗ್ರಹ ೧೯೨೦ ರಲ್ಲಿ ಬಂತು. ೧೯೩೩ ರ ವರೆಗೆ ಬಹಳ ಕತೆಗಳು ಬಂದವು. ೧೯೩೩ ರಲ್ಲಿ ಅ. ನ. ಕೃಷ್ಣರಾಯರು 'ಕಾಮನ ಬಿಲ್ಲು' ಎಂಬ ಕಥಾ ಸಂಗ್ರಹವನ್ನು ಆಯ್ದು ಪ್ರಕಟಿಸಿ ಅಲ್ಲಿಯ ವರೆಗೆ ಹುಟ್ಟಿ ಬಂದ ಕತೆಗಳನ್ನು ವಿಮರ್ಶಿಸಿದರು. ಸಣ್ಣಕತೆಗಳ ಸಾಹಿತ್ಯ ಚರಿತ್ರೆಯಲ್ಲಿ ಈ ವಿಮರ್ಶೆಗೆ ಮಹತ್ವದ ಸ್ಥಾನವಿದೆ. ಈ ಕಾಲದಲ್ಲಿ ಪ್ರಕಟವಾದ ಕತೆಗಳಿಗೆಲ್ಲ ಶ್ರೀನಿವಾಸರ ಆದರ್ಶವೇ ಕಣ್ಣ ಮುಂದೆ. ಎಲ್ಲ ಕತೆಗಾರರರೂ, ಕಥಾವಿಮರ್ಶಕರೂ ಶ್ರೀನಿವಾಸರನ್ನು ಪೂರ್ಣವಾಗಿ ಸ್ವೀಕರಿಸಿ ಅವರನ್ನು ಮುಕ್ತಕಂಠದಿಂದ ಹೊಗಳಿದರು.

"೧೯೨೦-೧೯೩೦ರ ಅವಧಿಯಲ್ಲಿ ಬಂದ ಸಣ್ಣಕತೆಗಳೆಲ್ಲ ಉತ್ತಮ ತರಗತಿಯವಾಗಿರದಿದ್ದರೂ ಅವೆಲ್ಲ ಕತೆಗಳ ಹಿಂದೆ ಲೇಖಕರ ಪರಿಶ್ರಮವನ್ನು ಕಾಣಬಹುದಾಗಿದೆ." ಎಂದಿದ್ದಾರೆ ಕೆ. ಡಿ. ಕುರ್ತಕೋಟಿಯವರು (ನಡೆದು ಬಂದ ದಾರಿ'ಯಲ್ಲಿ).

ಆನಂದ, ಆನಂದಕಂದ (ಬೆಟಗೇರಿ), ದೇವುಡು, ಕಾರಂತ, ಗೊರೂರ, ಮುಗಳಿ, ಬೇಂದ್ರೆ, ಕುವೆಂಪು ಇವರೆಲ್ಲ

ಇದೇ ಕಾಲದಲ್ಲಿ ಕತೆಗಳನ್ನು ಬರೆದರು. ಪುಸ್ತಕ ರೂಪದಿಂದ ಕೆಲವರು ತಡವಾಗಿ ಪ್ರಕಟಿಸಿರಬಹುದು. ಆದರೆ ಇಂದಿನ-ವರೆಗೂ ಬರೆಯುತ್ತಲೇ ಇರುವ ಪ್ರಸಿದ್ಧ ಸಾಹಿತಿಗಳಲ್ಲಿ ಕೆಲವರು ಇದೇ ಸಮಯದಲ್ಲಿ ಕೃತಿ ಆರಂಭಿಸಿದರು.

**(೨) ೧೯೩೩–೧೯೪೩ (ಚಿನ್ನದ ಕಾಲ)** : ಮೊದಲ ಕತೆಗಾರರ ಜೊತೆಗೆ ಸ್ವಾಮಿ, ಕೆ. ಗೋಪಾಲಕೃಷ್ಣ, ಅಶ್ವತ್ಥ, ಬಾಗಲೋಡಿ, ನಿ. ವ್ಯಾ. ಬಲ್ಲಾಳರು ಉತ್ತಮ ಕತೆ ಬರೆದರು. ೧೯೩೩ ರಿಂದ ಕನ್ನಡ ಕತೆಗಾರರ ಮುಂದೆ ಕಥಾ ಸಾಹಿತ್ಯದ ಬಗ್ಗೆ ಒಂದು ಸ್ಪಷ್ಟವಾದ ಅಭಿಪ್ರಾಯ ಮನಸ್ಸಿನಲ್ಲಿ ಮೂಡಿ ನಿಲ್ಲುವಂತಾಯಿತು. ಗುಣ–ದೋಷಗಳನ್ನು ಎತ್ತಿ ಹೇಳುವ ಧೈರ್ಯ ವಾಚಕರಲ್ಲಿ, ವಿಮರ್ಶಕರಲ್ಲಿ ಬೆಳೆಯತೊಡಗಿತು. ಹೊಸ ಸಮಸ್ಯೆಗಳು ಸುಳಿದಾಡತೊಡಗಿದವು. ಸ್ವಾತಂತ್ರ್ಯ ಚಳವಳಿ ಉಗ್ರರೂಪ ತಾಳಿ ಹೊಸ ಲೇಖಕರನ್ನು ಹುರಿದುಂಬಿಸಿತು. ದ್ವಿತೀಯ ಮಹಾಯುದ್ಧವೂ ಕತೆಗಾರರ ಅತೃಪ್ತ ಮನೋಭೂಮಿಕೆಯಲ್ಲಿ ಕಾವು ಹುಟ್ಟಿಸಿತು. ಇವೆಲ್ಲ ಪರಿಣಾಮದಿಂದ ಕಥಾ ಸಾಹಿತ್ಯಕ್ಕೆ ಹೊಸ ನೀರು ಬಂದು ಸೇರತೊಡಗಿತು. ಇದನ್ನು ಚಿನ್ನದ ಕಾಲವೆಂದು ಕರೆಯಬಹುದು. ೧೯೪೨ ರ ಚಳವಳಿ ನಾಡಿನ ಮೇಲೆ ತೀವ್ರ ಪರಿಣಾಮ ಮಾಡಿತು. ಅನೇಕ ಉತ್ತಮ ಕತೆಗಳು ಹುಟ್ಟಿದ್ದು ಇದೇ ಕಾಲದಲ್ಲಿ. ೧೯೪೩ ರಲ್ಲಿ ಸಾಂಘಿಕವಾಗಿ ಲೇಖಕರು 'ಪ್ರಗತಿಶೀಲ' ಚಳವಳಿಯನ್ನೇ ಪ್ರಾರಂಭಿಸಿದರು.

**(೩) ೧೯೪೩-೧೯೫೬ (ಪ್ರಗತಿಶೀಲ ಕಾಲ):**

೧೯೪೩ ರಿಂದ ಅ. ನ. ಕೃಷ್ಣರಾಯರ ನೇತೃತ್ವದಲ್ಲಿ ಕನ್ನಡ ತರುಣ ಲೇಖಕರು ಪ್ರಚಂಡ ಚಳವಳಿಯನ್ನೇ ಪ್ರಾರಂಭಿಸಿ ಸಂಪ್ರದಾಯ ಸಾಹಿತ್ಯವನ್ನು ಮನಬಲ್ಲಂತೆ ಟೀಕಿಸತೊಡಗಿದರು. "ಎಲ್ಲ ಹೊತ್ತಿನಲ್ಲೂ ರಾಮ, ಸೀತಾ, ದ್ರೌಪದಿ, ಸಾವಿತ್ರಿ ಎನ್ನುವ ಸಂಪ್ರದಾಯ ಶರಣರ ಬರವಣಿಗೆ ನಮಗೆ ಬೇಕಿಲ್ಲ. ಹೊಸ ರೀತಿಯ ಬರವಣಿಗೆ ಬರಬೇಕು. ನಮ್ಮ ದೇಶಕ್ಕೆ ಈಗ ಬೇಕಾಗಿರುವುದು ಸ್ವಾತಂತ್ರ್ಯ, ಅದನ್ನು ಸಾಧಿಸಲು ನೆರವಾಗುವ ಸಾಹಿತ್ಯ ನಮಗೆ ಬೇಕು, ಉಳಿದ ಸಾಹಿತ್ಯ ಬೇಡ; ನಮ್ಮ ಜನಕ್ಕೆ ಈಗ ಹೊಟ್ಟೆಗೆ ಅನ್ನವಿಲ್ಲ, ಉಡಲು ಬಟ್ಟೆ ಇಲ್ಲ; ಅನ್ನ ಒದಗಿಸುವ, ಬಟ್ಟೆ ಒದಗಿಸುವ ಸಾಹಿತ್ಯ ಬರಬೇಕು. 'ತುಂತ್ತಿನ ಚೀಲ', 'ಸುಬ್ಬಮ್ಮ ಹೆಗ್ಗಡಿತಿ' 'ಮರಳಿ ಮಣ್ಣಿಗೆ' ಬರೆದ ಲೇಖಕರು ಗಂಗಾವತರಣ, ರಾಮಾಯಣ, ಬೆಟ್ಟದ ಜೀವ ಎಂಬ ಗ್ರಂಥಗಳನ್ನು ಬರೆದದ್ದು ದುಃಖಕರ. ರಾಜಸೇವಾಸಕ್ತರು ಬರೆಯುವ ಸಾಹಿತ್ಯದಿಂದ ದೇಶದ ಏಳಿಗೆ ಆಗುವದಿಲ್ಲ. ಮಾಸ್ತಿಯವರ 'ಸುಬ್ಬಣ್ಣ' ಉತ್ತಮವಾದ ಕತೆ; ಆದರೆ ಇಂಥ ಕೃತಿಗಳನ್ನು ಓದಿ ನಮಗೆ ಸಾಕಾಗಿ ಈಗ ಅಜೀರ್ಣವಾಗಿದೆ, ನಮಗೆ ಬೇರೆ ಸಾಹಿತ್ಯ ಬೇಕು"— ಇದು ಚಳವಳಿಯ ಮಾದರಿಯನ್ನು ಹೇಳುತ್ತದೆ. ಈ ಚಳವಳಿಯಲ್ಲಿ ಸೇರಿದ ತರುಣ ಲೇಖಕರು ಹೆಚ್ಚಾಗಿ ಕತೆಗಾರರಾಗಿದ್ದರು. ಆದ್ದರಿಂದ ಅದು ಕಾವ್ಯ, ನಾಟಕಗಳ ಮೇಲೆ ಪರಿಣಾಮವಾಗಲಿಲ್ಲ. ಸಣ್ಣ ಕತೆಗಳ ಮೇಲೆ ಈ ಚಳವಳಿ ಮರೆಯು—

ಲಾರದ ಮುದ್ರೆಯೊತ್ತಿದೆ. ಈ ಚಳವಳಿ ಹೆಚ್ಚು ಕಾಲ ಉಳಿಯಲಿಲ್ಲ; ಆ ಮಾತು ಬೇರೆ. ಆದರೆ ಇದರಿಂದ ಸಣ್ಣ ಕತೆಗಳ ಸಾಹಿತ್ಯದಲ್ಲಿ ವೇಗ ಬಂತು. ತಂತ್ರ-ಶೈಲಿಗಳಲ್ಲಿ ಹೊಸ ಮಿಂಚು, ಗುಡುಗು ಕಾಣಿಸಿದವು. ನಿರೂಪಣಾಶಕ್ತಿ ಪರಿತವಾಯಿತು. ದೀನ ದಲಿತರ, ರೈತಕೂಲಿಕಾರರ ವಿಷಯ ಕಥಾವಸ್ತುವಾಗಿ ಬಂತು. ನೂರಾರು ಆಧುನಿಕ ಸಮಸ್ಯೆಗಳನ್ನು ಎತ್ತಿ ಕತೆ ಬರೆಯಲು ತರುಣರು ಮುಂದೆ ಬಂದರು. ಕಟ್ಟೀಮನಿ, ತ. ರಾ. ಸು., ನಿರಂಜನ, ಕೊೀ. ಚೆ., 'ಪ್ರಗತಿಶೀಲ' ಕತೆ ಬರೆದವರಲ್ಲಿ ಪ್ರಮುಖರು.

೧೯೪೫ ರಲ್ಲಿ ಯುದ್ಧ ನಿಂತಿತು. ಅದರ ಪರಿಣಾಮ ಸಾಹಿತ್ಯದ ಮೇಲೆ ಕಾಣಿಸಲಿಲ್ಲ. ೧೯೪೭ ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿತು. ಅದರಿಂದಲೂ ಕಥಾಸಾಹಿತ್ಯದಲ್ಲಿ ಸ್ಥಿತ್ಯಂತರವಾಗಲಿಲ್ಲ. ಆದರೆ ಯುದ್ಧಸಮಯದ ಜನರ ಅತೃಪ್ತಭಾವನೆ, ಸ್ವಾತಂತ್ರ್ಯದ ಹಸಿವು ಇವುಗಳ ಹೆಸರಿನ ಮೇಲೆ ಗುಲ್ಲೆಬ್ಬಿಸಿದ ಸಾಹಿತಿಗಳ ಬಾಯಿ ಮಾತ್ರ ಬಂದಾಯಿತು. ಕನ್ನಡ ನಾಡಿನ ಏಕೀಕರಣ ಚಳವಳಿಯೊಂದೇ ರಕ್ತನಾಳದ ಬಿಸಿಯನ್ನು ಉಳಿಸಿತ್ತು. ಅದೂ ಕೂಡ ೧೯೫೬ ರಲ್ಲಿ ನಡೆದ ಪ್ರಾಂತ ಪುನರ್ಘಟನೆಯಿಂದ ಪೂರ್ಣತಣ್ಣಗಾಯಿತು.

ಸಾಹಿತಿಯ ಈ ಮೌನಮುದ್ರೆ ಅವನನ್ನು ಅಂತರ್ಮುಖಿಯಾಗಿಸಿತು. ವಿಧಾಯಕ ಚಿಂತನೆಗೆ ತೊಡಗಿಸಿತು. ಮನಸ್ಸಿನ ಸೂಕ್ಷ್ಮಪದರುಗಳನ್ನು ಎಣಿಸಲು

ಹಚ್ಚಿತು. ಇದರಿಂದ ಕಥಾಸಾಹಿತ್ಯದಲ್ಲಿ ಆಧುನಿಕ ಕಲೆ ಕಾಣಿಸಿಕೊಳ್ಳಲು ಕಾರಣವಾಯಿತು. ನವ್ಯತೆ ರೂಪತಾಳಲು ಅವಕಾಶವಾಯಿತು.

**(೪) ೧೯೫೬ ರಿಂದ ಈಚೆಗೆ (ನವ್ಯಕಥೆಯ ಕಾಲ):**

೧೯೫೬ ರಲ್ಲಿ ಕನ್ನಡನಾಡು ಒಂದಾಯಿತು. ವಿವಿಧ ಭಾಗಗಳಲ್ಲಿ ಒಡೆದುಹೋದ ಕನ್ನಡಿಗರು ಒತ್ತಟ್ಟಿಗೆ ಸೇರಿದಾಗ ಅವರೆಲ್ಲರ ಮನ ಬೆಸೆದು ಒಂದಾಗುವ ಅವಶ್ಯಕತೆ ಉಂಟಾಯಿತು. ನಾಯಕರ ಅಧಿಕಾರ ಲಾಲಸೆಯ ಜಗ್ಗಾಟ ನಾಡಿನ ಏಳ್ಗೆಯಲ್ಲಿ ಆತಂಕ ಒಡ್ಡಿತು. ಹೊಸ ಹುರುಪಿನೊಂದಿಗೆ ಪ್ರಗತಿಯ ಹೊಸ ಹೆಜ್ಜೆ ಹಾಕಲು ಸ್ವಲ್ಪ ತಡವಾಯಿತು. ಈಗ ನಾಡಿನ ಸರ್ವ ಪ್ರಗತಿಗಳ ಜೊತೆಗೆ ಸಾಹಿತ್ಯ ಪ್ರಗತಿಯೂ ಆಗುತ್ತಿದೆ. ಕಥಾಸಾಹಿತ್ಯದಲ್ಲಿಯೂ ಅದರ ಬೆಳಕು ಕಾಣುತ್ತಿದೆ. ಹೊಸ ವಿಚಾರಸರಣಿ ಬರತೊಡಗಿದೆ.

೧೯೫೦ ರಲ್ಲಿ ನವ್ಯಕವಿತೆ ಕನ್ನಡದಲ್ಲಿ ಕಾಲಿಟ್ಟಿತು. ನವ್ಯಕತೆ ಸ್ವಲ್ಪ ತಡವಾಗಿ ಬಂದಿತು. ಕನ್ನಡ **ಹೊಸ ಸಣ್ಣ ಕತೆಗಳು** ಸಾಧಾರಣವಾಗಿ ಕನ್ನಡನಾಡಿನ ಏಕೀಕರಣದ ಹೊತ್ತಿಗೆ ಹುಟ್ಟಿಬಂದುದು ಶುಭ ಲಕ್ಷಣವೇ ಸೈ. ಸಣ್ಣಕತೆಯ ಸಾಹಿತ್ಯ ಚರಿತ್ರೆಯಲ್ಲಿ ಕನ್ನಡನಾಡಿನ ಏಕೀಕರಣದ (೧೯೫೬) ನಂತರ ಹೊಸ ರೀತಿಯೇ ಪ್ರಾರಂಭವಾಯಿತೆಂದು ಹೇಳಬಹುದು. ಹೊಸ ಸಣ್ಣ ಕತೆಗಳು ಮನಸ್ಸಿನ ಹೋರಾಟವನ್ನು ಚಿತ್ರಿಸಲು ತೊಡಗಿವೆ. ಬಾಹ್ಯ ಜಗತ್ತಿನ ಸ್ಥೂಲ

ಹೋರಾಟಕ್ಕಿಂತ ಆಂತರಿಕ ಸೂಕ್ಷ್ಮ ಹೋರಾಟ ಕನ್ನಡ ಕತೆಗಾರರಿಗೆ ಈಗ ಮಹತ್ವದ ವಿಷಯುವಾಗಿದೆ. ಮೇಲು-ನೋಟಕ್ಕೆ ಈ ಹೊಸ ಅಂಶ ಉಳಿದ ಚಳವಳಿಗಳಂತೆ ಎದ್ದು ಕಾಣುವದಿಲ್ಲ. ಬಹಳ ಜನ ವಾಚಕರ ಗಮನ ಸೆಳೆದಿಲ್ಲ. ಕಥಾವಿಮರ್ಶಕರೂ ಕೂಡ ಈ ಹೊಸ ಕತೆಗಳ ಬಗ್ಗೆ ಹೆಚ್ಚು ಆಸ್ಥೆ ವಹಿಸಿದಂತೆ ಕಾಣುವದಿಲ್ಲ. ಹೀಗಿದ್ದರೂ ಸಣ್ಣ ಕತೆಗಳಲ್ಲಿ ಕಾಣಿಸಿಕೊಂಡ ನವ್ಯತೆ ತೀಕ್ಷ್ಣವಾದುದು; ಕ್ರಾಂತಿಕಾರಿ ಯಾದುದು. ಜನಜೀವನದ ಸೂಕ್ಷ್ಮ ಸಂವೇದನೆಯನ್ನೇ ಕೆಣಕುವಂಥದು. ಹೀಗೆ ಉದಿಸಿದ ಈ ಸಾಹಿತ್ಯ ಜಾತಿ ಬೆಳೆದು ಬರಲು ಇನ್ನೂ ಸಾಕಷ್ಟು ಕಾಲಾವಕಾಶ ಬೇಕು. ಯಶವಂತ ಚಿತ್ತಾಲ, ಅನಂತಮೂರ್ತಿ, ಶಾಂತಿನಾಥ ದೇಸಾಯಿ, ಲಂಕೇಶ ಮುಂತಾದವರು ಉತ್ತಮ ನವ್ಯಕತೆಗಾರರು.

ಸಣ್ಣ ಕತೆಗಳಲ್ಲಿ ಈ ನಾಲ್ಕು ಘಟ್ಟಗಳನ್ನು ರಚಿಸುವಲ್ಲಿ ಹೊಸತನವಿದೆ. ಆದರೂ ಇಷ್ಟೆಲ್ಲ ಅನಾವಶ್ಯಕವೆಂದು ಕೆಲವ-ರಿಗೆ ಅನಿಸುವದು ಸ್ವಾಭಾವಿಕ. ೪೦-೫೦ ವರ್ಷಗಳ ಸಣ್ಣ-ಕತೆಗಳ ಸಾಹಿತ್ಯ ಚರಿತ್ರೆಗೆ ಇದೆಲ್ಲ ಯಾಕೆ ಎನ್ನಬಹುದು. ಆದರೂ ಆಸ್ಥೆಯುಳ್ಳ ಅಭ್ಯಾಸಿಗಳಿಗೆ ಅನುಕೂಲವೆಂದು ಹೀಗೆ ಮಾಡಲಾಗಿದೆ. ಇದೇನು ವಿಶಿಷ್ಟ ಅವಧಿಯಲ್ಲಿ ಆಗಿ ಹೋದ ವ್ಯಕ್ತಿಗಳನ್ನು ಸೂಚಿಸುವ ಹಳೆಯ ಸಾಹಿತ್ಯ ಚರಿತ್ರೆಯಲ್ಲಿ ಬರುವಂಥ ಕಾಲಖಂಡವಲ್ಲ. ಅಂದು ಬರೆದು ಬುನಾದಿಯನ್ನು ಹಾಕಿದ ಸಣ್ಣ ಕತೆಗಾರರಾದ ಶ್ರೀನಿವಾಸರು ಇಂದಿಗೂ ಬರೆಯು

ಯುತ್ತಿದ್ದಾರೆ. ಪ್ರಗತಿಶೀಲ ಚಳವಳಿಯ ನಾಯಕರಾಗಿದ್ದ ಅ. ನ. ಕೃ. ಅವರು ೧೯೨೬ ರಲ್ಲಿಯೇ ತಮ್ಮ ಮೊದಲ ಕತೆಗಳನ್ನು ಪ್ರಕಟಿಸಿ, ೧೯೪೩ ರಲ್ಲಿ ಚಳವಳಿ ಹೂಡಿ 'ಪ್ರಗತಿಶೀಲ' ಕತೆಗಳನ್ನು ಬರೆದು, ಸಣ್ಣ ಕತೆಗಳಲ್ಲಿ ತಮ್ಮ ಲೆಕ್ಕಣಿಕೆಯನ್ನು ಕೊನೆಯವರೆಗೂ ಬಳಸಿದರು (೧೯೭೧). ಆದ್ದರಿಂದ ಈ ಕಾಲದಲ್ಲಿ ಇಂಥ ಕತೆಗಾರರು ಆಗಿಹೋದರು' ಎಂಬುದನ್ನು ಸೂಚಿಸುವದಕ್ಕಾಗಿ ಈ ಘಟ್ಟಗಳನ್ನು ರಚಿಸಿಲ್ಲ; ಸಣ್ಣ ಕತೆಗಳಲ್ಲಿ ಸೂಕ್ಷ್ಮ ವ್ಯತ್ಯಾಸಗಳನ್ನು ತಿಳಿಸಲು, ಹೊಸಶಕ್ತಿ ಪ್ರಕಟವಾದುದನ್ನು ಎತ್ತಿ ತೋರಿಸಲು ರಚಿಸಲಾಗಿದೆ.

ಕನ್ನಡದಲ್ಲಿ ಸಣ್ಣಕತೆಗಳ ಬರವಣಿಗೆ ಈಚೆಗೆ ಕಡಮೆಯಾಗಿ ಕಂಡುಬರುತ್ತಿದ್ದರೂ ಒಂದು ಕಾಲದಲ್ಲಿ ಅದು ಆಧುನಿಕ ಕನ್ನಡ ಸಾಹಿತ್ಯದ ಪ್ರಧಾನರೂಪವಾಗಿ, ಪ್ರಬಲ ಸಾಧನವಾಗಿ ರೂಪುಗೊಂಡಿದ್ದುದನ್ನು ಮರೆಯುವಂತಿಲ್ಲ. ನೂರಾರು ಸಣ್ಣ ಕತೆಗಾರರು ತಮ್ಮ ಕೃತಿಗಳಿಂದ ಈ ಸಾಹಿತ್ಯ ಪ್ರಕಾರವನ್ನು ಸಮೃದ್ಧಿಗೊಳಿಸಿದರು. ಅವರಲ್ಲಿ ಹಲವರಾದರೂ ಪ್ರಮುಖ ಕತೆಗಾರರ ಹೆಸರುಗಳನ್ನು ಹೇಳಿದ್ದರೂ ಅವರ ಕೃತಿಗಳ ವಿಮರ್ಶಾವಲೋಕನವನ್ನು ಸ್ಥಳಾಭಾವದಿಂದ ಇಲ್ಲಿ ಬಿಟ್ಟು-ಕೊಡಲಾಗಿದೆ. ಕನ್ನಡ ಸಣ್ಣಕತೆಗಳ ಸಮೃದ್ಧಿ ಕಣ್ಣೆದುರಿ-ಗಿದ್ದರೂ ಇನ್ನೂ ನಮ್ಮಲ್ಲಿ ಅಧಿಕ ಸಂಖ್ಯೆಯಲ್ಲಿ ಉತ್ತಮ ಕತೆಗಳು ಬರಬೇಕು ಎಂಬ ಮಾತನ್ನು ಮಾತ್ರ ಹೇಳದೆ ವಿಧಿಯಿಲ್ಲ.

---

## ಸಮಾರೋಪ

ಕನ್ನಡ ಕಥಾಸೃಷ್ಟಿ ಸುಂದರವಾಗಿದೆ; ಆಳವಾಗಿದೆ; ವ್ಯಾಪಕವಾಗಿದೆ. ವಿಶ್ವದ ಯಾವ ಭಾಷೆಯ ಕಥಾಸೃಷ್ಟಿಗಿಂತಲೂ ಕಡಿಮೆಯದಲ್ಲ. ಎಲ್ಲರ ಮಧ್ಯದಲ್ಲಿ ಸಮಾನ ಯೋಗ್ಯತೆಯಿಂದ ಮೆರೆಯುತ್ತಿದೆ. ಆದರೆ, ಸಂತೃಪ್ತಿಗಿಂತ ಅತೃಪ್ತಿ ಪ್ರಗತಿಗೆ ಮಾರ್ಗ ಮಾಡಿಕೊಡುವುದಿಲ್ಲವೆ? ಸಾಕು ಎಂಬುದು ಸಾವು; ಬೇಕು ಎಂಬುದು ಬದುಕು. ಆ ದೃಷ್ಟಿಯಿಂದ ವಿಚಾರಿಸಿದರೆ ನಮಗಿನ್ನೂ ಹೊಸ ಕತೆಗಳು ಬೇಕು. ನಮ್ಮ ಕೊರತೆಯನ್ನು ತುಂಬಲು ವಿಶ್ವಪ್ರಯತ್ನ ಮಾಡಬೇಕು.

---

## ಗ್ರಂಥಋಣ

೧. ಸಂಭಾವನೆ
(ಸಣ್ಣಕತೆ: ಶ್ರೀ ಕೆ. ಗೋಪಾಲಕೃಷ್ಣರಾಯರು)
೨. ಪ್ರಬುದ್ಧ ಕರ್ನಾಟಕ (ಬೆಳ್ಳಿಯ ಸಂಚಿಕೆ)
೩. ಪೂಜನ—ಮಾಸ್ತಿ ವೆಂಕಟೇಶ ಅಯ್ಯಂಗಾರ
೪. ಪ್ರಸಂಗ—ಶ್ರೀನಿವಾಸ
(ಮಾಸ್ತಿ ವೆಂಕಟೇಶ ಅಯ್ಯಂಗಾರ)
೫. ಕನ್ನಡ ಗದ್ಯ ವಿಕಾಸ—ಎನ್. ಬಸವಾರಾಧ್ಯ, ಎಂ. ಎ.
೬. ಕನ್ನಡ ಸಾಹಿತ್ಯ ಚರಿತ್ರೆ—
ರಂ. ಶ್ರೀ. ಮುಗಳಿ ಎಂ. ಎ., ಬಿ. ಟಿ., ಡಿ.ಲಿಟ್.
೭. ಲೇಖನ ಕಲೆ—ಮಿರ್ಜಿ ಅಣ್ಣಾರಾಯರು
೮. ಜನಪದ ಜೀವನ—ಬೆಟಗೇರಿ ಕೃಷ್ಣಶರ್ಮ
೯. ಸಾಹಿತ್ಯ ಸಂದರ್ಶನ—ಕೃಷ್ಣಮೂರ್ತಿ ಪುರಾಣಿಕ
೧೦. ನಯಸೇನ—ಜಿ. ವೆಂಕಟಸುಬ್ಬಯ್ಯ
೧೧. ಮಾಸ್ತಿ ವೆಂಕಟೇಶ ಅಯ್ಯಂಗಾರ—
ಎಲ್. ಎಸ್. ಶೇಷಗಿರಿರಾವ್
೧೨. ನಡೆದು ಬಂದ ದಾರಿ ೧, ೨, ೩.
೧೩. ಹೊಸಗನ್ನಡ ಸಾಹಿತ್ಯ ಶೈಲಿ—ಬ. ಹೆ. ಶ್ರೀಧರ
೧೪. ಈ ಗ್ರಂಥದಲ್ಲಿ ಉದಾಹರಿಸಿದ ಕತೆಗಾರರ
ಕಥಾಸಂಗ್ರಹಗಳಲ್ಲಿ ಕೆಲವು.
೧೫. ಹೊಸಗನ್ನಡ ಕಥಾಸಂಗ್ರಹ

---

## ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ



---


ವ್ಯಾಸಂಗವಿಸ್ತರಣ-ಪ್ರಕಟನೆ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ—೫೮೦೦೦೩